# ರಾಮಾನುಜರು ಬಂದರು



ದಿನಾಂಕ: ೧೫-೧-೯೯ ರಂದು ಶ್ರೀ ಪೆರಂಬದೂರಿನಲ್ಲಿ, ಶ್ರೀ ರಾಮಾನುಜ ಜ್ಯೋತಿಯನ್ನು, ಬೆಂಗಳೂರಿನ ಶ್ರೀ ರಾಮಾನುಜ ಸೇವಾ ಟ್ರಸ್ಟಿನ ಆದ್ಯ ಪ್ರವರ್ತಕರಾದ ಶ್ರೀ [illegible] ರವರು ಕರ್ನಾಟಕಕ್ಕೆ ವಿಜಯ ಮಾಡಿಸಿಕೊಂಡು ಹೊರಟಿರುವುದು.



ದಿ.೨೪.೧.೯೯ರಂದು ಶ್ರೀ ರಾಮಾನುಜಜ್ಯೋತಿ ಬೆಂಗಳೂರಿಗೆ ಆಗಮಿಸಿದಾಗ ವಿದ್ವತ್ ಗೋಷ್ಠಿಯವರಿಂದ ಭಕ್ತಿ ವೇದ ಕುಸುಮಾಂಜಲಿಯ ಸೇವೆ

॥ ಶ್ರೀಮತೇ ರಾಮಾನುಜಾಯ ನಮಃ ॥



# ತಿರುಪ್ಪಾವೈ ಗೀತಮಾಲೆ



॥ ಶ್ರೀ ಶ್ರೀನಿವಾಸ ಪರಬ್ರಹ್ಮಣೇ ನಮಃ ॥

**This book is printed and published with the Financial Assistance of**

**TIRUMALA - TIRUPATI - DEVASTANAMS**

**under their scheme AID to publish religious books**

| | | |
|---|---|---|
| Title of the book | : | **THIRUPPAVAI GEETAMALE** |
| Language | : | In Kannada |
| Original Author | : | **SREE ANDAL (GODADEVI)**<br>In Tamil |
| Translation | : | **"DASAGOPALA"**<br>Archak Venugopal B.S. (Mysore)<br>Sree Athamarama Kshetra<br>Narasipura, Nelamangala Taluk<br>Bangalore Dist - 562 111. |
| Publishers | : | **SREE RAMANUJA SEVA TRUST**<br>Adarsha Bhavan,<br>No. 151, 15th Cross,<br>Malleshwaram, Bangalore-560 010. |
| Year of Publication | : | Pramathi Margashira Shukla<br>11th January 2000<br>Koodaraivellum |
| Printers | : | **G.K. OFFSET PRINTERS**<br>Tumkur. |

॥ ಶ್ರೀಮತೇ ರಾಮಾನುಜಾಯ ನಮಃ ॥



## ಶ್ರೀ ಗೋದಾದೇವಿ ಅನುಗ್ರಹಿಸಿದ

# ತಿರುಪ್ಪಾವೈ ಗೀತಮಾಲೆ


ಸಂಗ್ರಹ - ಭಾವಾನುವಾದ

"ದಾಸಗೋಪಾಲ"

(ಅರ್ಚಕ ವೇಣುಗೋಪಾಲ್ ಬಿ.ಎಸ್.) (ಮೈಸೂರು)

ಶ್ರೀ ಆತ್ಮಾರಾಮ ಕ್ಷೇತ್ರ, ನರಸೀಪುರ,

ನೆಲಮಂಗಲ ತಾಲ್ಲೂಕು ಬೆಂಗಳೂರು ಜಿಲ್ಲೆ.



ಪ್ರಕಾಶಕರು :

## ಶ್ರೀ ರಾಮಾನುಜ ಸೇವಾ ಟ್ರಸ್ಟ್

"ಆದರ್ಶ ಭವನ"

*ನಂ. 151, 15 ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - 560 010.*

# ಬಂದೆನ್ನ ಜಿಹ್ವೆಯಲಿ ನೆಲೆಸಯ್ಯ

ನಿನ್ನ ನಾಮದ ಸ್ಮರಣೆ ಎನ್ನ ನಾಲಿಗೆಗೆ ಬರಲಿ
ಯಾದವಾಚಲವಾಸ ತಿರುಶೆಲ್ವ ನಾರಾಯಣ || ಪ ||

ಬೀಬಿನಾಚ್ಚಾರು ಸಿರಿಗೋದೆಯರಸನೇ ದೇವಾ
ಶಂಖಚಕ್ರಧರ ಲೋಕ ಮೋಹಕ ಶ್ಯಾಮ || ಅ ಪ ||



ಭಾಷ್ಯಕಾರರಿಗೊಲಿದು ಮಮತೆಯಲಿ ಬಂದವನೆ
ನಿತ್ಯೋತ್ಸವವು ನಿನಗೆ ದೇವ ದೇವ ಜಗನ್ನಾಥ
ತಿರುನಾರಾಯಣಾದ್ರೀಶ ವೇದನಾದಾಂತರಂಗ
ಪಾಲ್ಗಡಲ ಶಯನ ಪದುಮನಾಭ ಶ್ರೀ ರಂಗ ರಂಗ || ೧ ||

ಮಣ್ಣು ಹೊನ್ನನು ಬಯಸಿ ಬರಿದೆ ಬಳಲಿದೆ ಭವದಿ
ವ್ಯರ್ಥವಾಯಿತು ಕಾಲ ನಿನ್ನ ಸ್ಮರಣೆಯ ಬಿಟ್ಟು
ಮನ್ನಿಸೆನ್ನನು ಸಲಹೊ ಜನಕ ಜನನಿ ನೀನಲ್ಲವೇನೋ
ಕೃಷ್ಣೆಯಳಲನು ಕಳೆದ ಕಾರಣ್ಯ ಸಿಂಧು ಮಧುರಾಧಿಪತೇ || ೨ ||

ಕಂಡೆ ನಿನ್ನಯ ಚರಣ ಗರುಡಗಮನ ಸಿರಿದೇವಿ ರಮಣ
ಪಲ್ಲವೋತ್ಸವದಂದು ನೀ ಬರಲು ಲೋಕಮಾತೆಯರೊಡನಾಡಿ
ಭುವಿಯ ವೈಕುಂಠದಲಿ ನಿಂತ ದಾಸಗೋಪಾಲನ ಮೊರೆಕೇಳಿ
ಬಂದೆನ್ನ ಜಿಹ್ವೆಯಲಿ ನೆಲೆಸಯ್ಯ ವಿಷ್ಣುಚಿತ್ತಾತ್ಮನಿಲಯ || ೩ ||

# ಹೃದಯ ಬೃಂದಾವನದಲ್ಲಿ



ಹೃದಯ ಬೃಂದಾವನದಲ್ಲಿ ಆಡು ಬಾ ಕೃಷ್ಣಯ್ಯ
ಯಾದವಾಚಲವಾಸ ತಿರು ಶೆಲ್ವ ನಾರಾಯಣ || ಪ ||

ಭಕ್ತಿ ಭಾಷ್ಪಾಂಜಲಿಯ ಅರ್ಪಿಸಿಹೆ ನಿನ್ನಡಿಗೆ
ಯತಿರಾಜ ವರದ ಭಕ್ತಿಪ್ರಿಯನು ನೀನಲ್ಲವೇನೋ || ಅ ಪ ||

ಕೊಳಲ ಗಾನವ ಹರಿಸಿದೆ ನೀನು ನಂದಗೋಕುಲದಲ್ಲಿ
ಕ್ಷೀರಧಾರೆಯ ಹರಿಸಿದೆಯೋ ವಿಧುರಾನಲಯದಲ್ಲಿ
ಶಿಶುಪಾಲನನು ಮರ್ಧಿಸಿದೆ ಯಾಗ ಮಂಟಪದಲ್ಲಿ
ಚಕ್ರಧಾರಿಯು ನೀನಾದೆ ರಣರಂಗದಲ್ಲಿ ಶ್ರೀಕೃಷ್ಣ || ೧ ||

ಕಟಿಯಲ್ಲಿ ಕರವಿಟ್ಟು ನೀನಿಂತೆ ಭೀಮೆಯ ತಟದಲ್ಲಿ
ಸೇವಕನಾಗಿ ನೀತಂದೆ ಧನಧಾನ್ಯ ಭಕ್ತನಾ ಮನೆಗೆ
ಪಾದಪೂಜೆಯ ಗೈದೆ ಸುಧಾಮನಿಗೊಲಿದು
ಲೀಲೆಯಲಿ ಗೋವರ್ಧನ ಗಿರಿಯನೆತ್ತಿ ನೀನಿಂತೆ || ೨ ||

ಮಾತೆ ಮಮತೆಗೆ ಸಿಲುಕಿ ದಾಮೋದರನು ನೀನಾದೆ
ಬ್ರಹ್ಮಾಂಡವನೆ ನೀ ತೋರ್ದೆ ಬಾಯಲ್ಲಿ ಬಾಲಕೃಷ್ಣಯ್ಯ
ದಾಸಗೋಪಾಲ ವರದ ವೇದಾದ್ರಿವಾಸ ಚೆಲುವ ನಾರಾಯಣನೆ
ಬೇಡುವೆನು ಭಕುತಿಯಲಿ ಬಂದೆನ್ನ ಹೃದಯದಲಿ ನೆಲೆಸಯ್ಯ || ೩ ||







## ಅರ್ಪಣೆ :



ಬಡತನದ ಭಾವನೆಯೇ ಬಾರದಂತೆ ಹಸನ್ಮುಖಿಯಾಗಿ ಸಹನೆಯ ಪ್ರತಿರೂಪ ತಾನಾಗಿ ತನಗಾಗಿ ಏನನ್ನೂ ಅಪೇಕ್ಷಿಸದೆ ನಮ್ಮ ಬಾಳರಥವನ್ನು ನಡೆಸಿಕೊಂಡು ಬಾಳ ದೇಗುಲದ ಬೆಳಕಾಗಿ ನನ್ನನನವರತ ಮುನ್ನಡೆಸಿಕೊಂಡು ಬರುತ್ತಿರುವ ನನ್ನ ಧರ್ಮಪತ್ನಿ

## ಸೌ॥ ಯಶೋದೆಗೆ

( ಮೈಸೂರಿನ ಶ್ರೀಮತಿ ಕಲ್ಯಾಣಮ್ಮ ಮತ್ತು ಕಡಬಂ ಶಾಮಾಪಂಡಿತರ ಪುತ್ರಿ )

ಪ್ರೀತಿಪೂರ್ವಕವಾಗಿ ಈ ಕೃತಿಯ ಅರ್ಪಣೆ

ಜೈ ಶ್ರೀರಾಮ್







"ದಾಸಗೋಪಾಲ"

ಅರ್ಚಕ ವೇಣುಗೋಪಾಲ್ ಬಿ.ಎಸ್. ) (ಮೈಸೂರು)

ಶ್ರೀ ಆತ್ಮಾರಾಮ ಕ್ಷೇತ್ರ, ನರಸೀಪುರ,

ನೆಲಮಂಗಲ ತಾಲ್ಲೂಕು ಬೆಂಗಳೂರು ಜಿಲ್ಲೆ.

## ಬೆಳಗು ನೀನನವರತ

ದೇಗುಲದಿ ದೀವಿಗೆಯ ಬೆಳಗಿಹೆನು ನರಹರಿಯೆ
ಪತಿತ ಪಾವನ ಚರಣ ಪಾಲ್ಗಡಲ ಶ್ರೀರಮಣ ಧರಣಿಜಾ ರಮಣ ॥ಪ॥

ಬೇಡುವೆನು ಬೆಳಗೆಂದು ಹೃದಯ ದೇಗುಲದಲ್ಲಿ
ದೇವದೇವನೆ ರುಕ್ಮಿಣೀರಮಣ ತಿರುಶೆಲ್ವ ನಾರಾಯಣ ॥ಅ.ಪ॥



ಭಕ್ತಿ ತೈಲವ ತುಂಬಿ ಮುಗ್ಧಬತ್ತಿಯ ಬೆಳಗಿ ಬೇಡುವೆನು ಶ್ರೀ ಹರಿಯೆ
ಭವದಿರುಳ ನೀಗಿಸುತ ಬೆಳಗು ನೀ ನೆನ್ನ ಹೃದಯ ಬೃಂದಾವನದಿ
ಸಿರಿಗೋದೆಯರಸನೇ ಶ್ರೀ ರಂಗರಂಗ ಶ್ರೀ ಶ್ರೀನಿವಾಸ
ನಂದಯಶೋದಾಕಂದ ಸಿರಿನಿಧಿಯೆ ಶ್ರೀ ಮುಕುಂದ ॥ 1 ॥

ಭುವಿಬಾನಿನೆತ್ತರಕೆ ನೀ ಬೆಳೆದೆ ಬೇಡಿ ಮೂರಡಿಯನ್ನೆ
ಬಲಿಯ ಭಾವಶುದ್ಧಿಗೆ ನೀ ಸೋತೆ ನಿಂತೆ ನೀ ಬಾಗಿಲಲಿ ಬೆಳಕಾಗಿ
ಬರುತಿರುವೆ ಬೆಳಗಿರುವೆ ಭುವಿಬಾನ ತುಂಬೆಲ್ಲ ಬೆಳಕಾಗಿ
ಜ್ಞಾನಗಮ್ಯನೆ ದೇವ ಬೆಳಗೆನ್ನ ಮನದಲ್ಲಿ ಜ್ಞಾನದೀವಿಗೆಯಾಗಿ ॥ 2 ॥

ಭಕ್ತ ಶೇಖರರ ಇಷ್ಟದೇವನೆ ಶ್ರೀಕೃಷ್ಣ ಇಷ್ಟಾರ್ಥಗಳ ನೀಡೆಮಗೆ
ದಶರಥಾತ್ಮಜನೆ ಲೀಲಾವತಾರಿಯೆ ವೇದರಕ್ಷಕನೆ ವಾಜಿವದನನೇ
ಭಾಷ್ಯಕಾರರಿಗೊಲಿದ ಭಕ್ತ ಬಾಂಧವನೆ ಭವಭೀತಿ ಹರನೇ
ದಾಸಗೋಪಾಲನ ಹೃನ್ಮಾನಂದ ಶ್ರೀ ಚೆಲುವ ನಾರಾಯಣನೇ ॥ 3 ॥

## ಕಂಡೆ ನಾ ರಾಮಾನುಜರ



ಧನ್ಯನಾದೆನು ನಾನಿಂದು ಧನ್ಯರನ್ನೆಲ್ಲ ಕುಲಕೋಟಿ
ಜ್ಯೋತಿರೂಪದಿ ಬಂದ ರಾಮಾನುಜರ ನಾ ಕಂಡೆ ॥ಪ॥

ತಿದ್ದಿದಾ ತಿರುನಾಮ ಶ್ರೀತುಳಸಿ ಮಣಿಮಾಲೆ ಕೊರಳಲ್ಲಿ
ತ್ರಿದಂಡದಿಂದೊಪ್ಪುವಾ ಶ್ರೀಗುರುವ ನಾ ಕಂಡೆ ॥ಅ ಪ॥

ಪಾವನವೀ ಧರೆಯು ಗುರು ಚರಣ ಸ್ಪರ್ಷದಿಂದಿಂದು
ಈ ಧರೆಯ ಧೂಳಿಮಗೆ ತಿರುವಾಭರಣವಾಗಿಹುದು
ನಾರಾಯಣ ನಾಮ ತಿರುಮಂತ್ರೋಪದೇಶ ಗೈದೆಮ್ಮ
ಮಾತೆ ಮಮತೆಯ ಗುರುಚರಣವನೆ ನಾ ಕಂಡೆ ॥ 1 ॥

ಯತಿರಾಜನೊಡನೈದ ಪಾರ್ಥ ಸಾರಥಿಯಾ ನಾ ಕಂಡೆ
ಬೀಬಿನಾಚಾರ್‍ಯರು ಮನದನ್ನನಾ ಕಂಡೆ ಮುನಿಯೊಡನೆ
ವೇದನಾದಕೆ ನಲಿವ ವೇಣು ಮಾಧವನಾ ಕಂಡೆ
ವೈಕುಂಠ ತಾನಾಯ್ತು ವೇದಾದ್ರಿ ಗಿರಿಶಿಖರ ॥ 2 ॥

ನಿತ್ಯಸೂರಿಗಳ ನಾಕಂಡೆ ಜ್ಞಾನಗಮ್ಯನನು ನಾ ಕಂಡೆನವರಲ್ಲಿ
ಸಾನುರಾಗದಿ ಮಾಲಕುಮಿ ಸೇವಿಪಾ ಸಿರಿಪಾದವನೆ ಕಂಡೆ
ದಾಸಗೋಪಾಲನ ಕುಲಗುರುವೆ ಯತಿರಾಜ ನಿಮ್ಮನೇ ನಾ ಕಂಡೆ
ಪದುಮನಾಭನ ಪಾದದೊಲುಮೆಯು ಎನಗಾಯ್ತು ಇಂದು ॥ 3 ॥



ಓಂ



ನಮೋ



ನಾರಾಯಣಾಯ



ಶ್ರೀಶಂ ನಮಾಮಿ
ಶಿರಸಾ
ಯದುಶೈಲ ದೀಪಂ



# ರಾಮಾನುಜರು ಬಂದರು



ರಾಮಾನುಜರು ಬಂದರು ಯಾದವಾದ್ರಿಗೆ ನೋಡಿರೋ
ಯಾವ ಜನ್ಮದ ಪುಣ್ಯ ಗುರುವಿನೀ ಕಾರುಣ್ಯ ||ಪ||

ಮುನಿಗಳೊಡನಾಡಿ ತಾ ಬಂದ ಮಂಗಳಾಂಗನ ಕಂಡೆ
ಮುಕ್ತಿ ಮಾರ್ಗಕೆ ಯೋಗ್ಯ ನಾನಾದೆನೆಂದು ||ಅ ಪ||

ಸಿರಿಯೊಡೆಯನೊಡನಾಡಿ ಶ್ರೀ ಗುರುವು ಬರಲಿಂದು
ದಹಿಸಿಹೋದೆವು ನಮ್ಮೆಲ್ಲ ಪಾಪರಾಶಿಗಳಿಂದು
ವಲ್ಮೀಕದಿಂದುದಿಸಿದ ಚೆಲ್ವನಾರಾಯಣನ ನಾ ಕಂಡೆ
ಜನ್ಮರಹಿತನು ನಾನಾದೆ ಪಾವನವು ಎನ್ನೆಲ್ಲ ಕುಲಕೋಟಿ || 1 ||

ಬೀಬಿನಾಚ್ಚಾರರು ತಾನರಸಿ ಬಂದಳು ಚೆಲ್ವಡಿಯ ಶ್ರೀ ನಿಧಿಯ
ಸಿರಿರಮಣನಾ ಕಂಡೆ ಯತಿರಾಜರೊಡನಿರಲು
ಜ್ಞಾನಜ್ಯೋತಿಯನು ಕಂಡೆ ಜ್ಞಾನಗಮ್ಯನನು ನಾ ಕಂಡೆ
ಭವದ ದುರಿತಗಳೆಲ್ಲ ಭಂಗವಾಗಿರಲಿಂದು ಸಿರಿವಂತ ನಾನಾದೆ || 2 ||

ಆದಿಶೇಷನು ಬಂದ ಎಂದೆನುತ ಶೇಷಶಯನನು ಬಂದ
ವಲ್ಮೀಕದಿಂದುದಿಸಿ ವರದಹಸ್ತದಿ ನಿಂತ ನಂದನಂದನನಾ ಕಂಡೆ
ದಾಸಗೋಪಾಲ ವರದನಾ ಕಂಡೆ ಭಾಗವತೋತ್ತರ ಸಿರಿಪಾದ ಕಂಡೆ
ಭುವಿಯ ವೈಕುಂಠ ತಾನಾಯ್ತು ಯಾದವಾದ್ರಿಯು ಇಂದು || 3 ||

# ಧನ್ಯನಾದೆ ನಾನಿಂದು



ಕಂಡೆ ಕಂಡೆ ಕಂಡು ಧನ್ಯನಾದೆನಿಂದು
ಯಾದವಾಚಲವಾಸ ನಿನ್ನ ಚರಣ ಕಮಲಗಳನು ||ಪ||

ರಾಜರಾಜ ಯತಿರಾಜಗೊಲಿದು ಬಂದ ಚರಣ
ಯದುಶೈಲ ನಿಲಯ ಚೆಲ್ವನಾರಾಯಣನ ಚರಣ ||ಅ ಪ||

ಸಾನುರಾಗದಿ ಮಹಾಲಕ್ಷ್ಮಿ ಸತತ ಸೇವಿಪ ಚರಣ
ದೇವಮುನಿ ತಾ ಪಾಡಿ ಧನ್ಯನಾಗಿಹ ಚರಣ
ವನಿತೆ ಶಾಪವ ಕಳೆದ ಕಾರುಣ್ಯ ಚರಣ
ಅಮರ ಗಂಗಾಜನಕ ನಿನ್ನ ಅಸಮಾನ ಚರಣ || 1 ||

ಬೀಬಿನಾಚ್ಚಾರು ತಾನರಸಿಬಂದಾ ಚೆಲುವ ಚರಣ
ಸಿರಿಗೋದೆ ತಾನನುದಿನವು ಪಾಡಿ ಸೇವಿಪಾ ಚರಣ
ಬಲಿಯ ಮೆಟ್ಟಿದ ಚರಣ ಭುವಿಯ ಸಲಹಿದ ಚರಣ
ದ್ರುಪದ ಕುವರಿಯ ಸಲಹಿದಾ ದಾಮೋದರನ ಚರಣ || 2 ||

ಲಕ್ಷ್ಮಣಾಗ್ರಜ ಶ್ರೀ ಕೋದಂಡ ಧರನ ದಿವ್ಯ ಚರಣ
ಹನುಮನನುದಿನವು ಜಪಿಸುವಾ ಆತ್ಮಾರಾಮನ ಚರಣ
ಯತಿರಾಜ ತಿರುಚೆಲ್ವ ನಾರಾಯಣನ ದಿವ್ಯಮಂಗಳ ಚರಣ
ದಾಸಗೋಪಾಲ ವರದ ಯದುಶೈಲನಾಥನಾ ಚರಣ || 3 ||



# ಶ್ರೀ ರಾಮಾನುಜ ಸೇವಾ ಟ್ರಸ್ಟ್

ನಂ. 151, 15 ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು.



## ಪ್ರಕಾಶಕರ ನುಡಿ

*ಈ ನವಶತಮಾನ ಹೊಸ ಚೈತನ್ನ ನೀಡಲಿ; ಶುಭ ಶಾಂತಿ ಹರಡಲಿ*

ನಮ್ಮ ಸನಾತನ ಭಾರತೀಯ ಸಂಸ್ಕೃತಿ ಪರಂಪರೆ ಇತಿಹಾಸ ತತ್ತ್ವಜ್ಞಾನ ಇವುಗಳ ಹಿರಿಮೆ ನಮ್ಮ ರಾಷ್ಟ್ರ ಜೀವನವನ್ನು ಸಂಪನ್ನಗೊಳಿಸಿದೆ. ನಮ್ಮ ಅಮೂಲ್ಯ ನಿಧಿಗಳಾದ ಶ್ರೀಮದ್ರಾಮಾಯಣ, ಮಹಾಭಾರತ, ಭಾಗವತ ಗ್ರಂಥಗಳು ಸಾರ್ವಕಾಲಿಕ ಮೌಲ್ಯಗಳಿಂದ ಕೂಡಿ ಇಂದಿಗೂ ಜನಸಾಮಾನ್ಯರಿಗೆ ಚಿಂತನಶೀಲರಿಗೆ ಜೀವನಮಾರ್ಗ ತೋರುತ್ತಾ ಬಂದಿದೆ. ಹಾಗಾಗಿ ಸಮಾಜದಲ್ಲಿ ಶಾಂತಿಸುಖವನ್ನು ಕಾಣಲು ಈ ಕೃತಿಗಳು ನಮಗೆ ಸದಾ ಸಂಗಾತಿಗಳು.

ಭಗವಾನ್ ಶ್ರೀರಾಮಾನುಜರು ಸುಮಾರು 1000 ವರ್ಷಗಳ ಹಿಂದೆ ನಾಡಿನ ಉದ್ದಗಲಕ್ಕೂ ಕಾಲುನಡೆಯಲ್ಲೇ ಸಂಚರಿಸಿ ತಮ್ಮ ಜೀವನದಿಂದ ಕೃತಿಯಿಂದ, ಮಾತಿನಿಂದ, ಸಮಾಜದಲ್ಲಿ ಉತ್ತಮ ಪರಿವರ್ತನೆಯನ್ನು ತಂದ ಆಚಾರ್ಯರುಗಳಲ್ಲಿ ಒಬ್ಬರು. ಶ್ರೀರಾಮಾನುಜರು ತಮ್ಮ ಔದಾರ್ಯ ಗುಣದಿಂದ ಜನಸಾಮಾನ್ಯರ ಅಂತಃಕರಣವನ್ನು ತಟ್ಟಿ ಎಬ್ಬಿಸಿ ಭಗವಂತನನ್ನು ಕಾಣಲು ಮಾರ್ಗದರ್ಶಿಯಾದರು. ಆಚಾರ್ಯ ರಾಮಾನುಜರ ಚಿಂತನಗಳನ್ನು ಜನಸಾಮಾನ್ಯರ ಬದುಕಿಗೆ ಅಳವಡಿಸಲು ಶ್ರೀರಾಮಾನುಜ ಸೇವಾ ಟ್ರಸ್ಟ್ 1980 ರಲ್ಲಿ ಜನ್ಮ ತಾಳಿತು. ಇದು ಆಚಾರ್ಯ ರಾಮಾನುಜರ ಜೀವನದ ಸಂಕೇತವಾದ ಸಮಾಜಸೇವೆಯ ಕಲ್ಪನೆಯನ್ನು ಮೂಡಿಸಿಕೊಂಡು, ಗ್ರಾಮಾಭಿವೃದ್ಧಿ, ವೈದ್ಯಕೀಯ ನೆರವು, ಕ್ಷೇತ್ರೋದ್ಧಾರ, ಸಾಹಿತ್ಯ ಸಂಸ್ಕೃತಿ ನಿರ್ಮಾಣ ಮುಂತಾದ ಹಲವು ಸಮಾಜಸೇವಾ ಚಟುವಟಿಕೆಗಳನ್ನು ನಡೆಸುತ್ತಾ ಸಮಾಜದೊಡನೆ ಬೆಳೆಯುತ್ತಾ ಬಂದಿದೆ.

ನಮ್ಮ ಸಮಾಜದಲ್ಲಿ ಭಗವನ್ನಂಬಿಕೆಗಳನ್ನು ದೃಢಪಡಿಸಿ ಬೆಳೆಸಲು ಸದಭಿರುಚಿಯ ಸಾಹಿತ್ಯ ಸೃಷ್ಟಿಸಲು ಶ್ರೀರಾಮಾನುಜ ಸೇವಾ ಟ್ರಸ್ಟ್‌ನ ಪ್ರಕಾಶನ ವಿಭಾಗ 'ಶ್ರೀ ರಾಮಾನುಜ ಭಾರತೀ' ಕಾರ್ಯಾರಂಭ ಮಾಡಿದೆ. ಜಗತ್ತಿಗೆ ಶ್ರೀರಾಮಾನುಜರ ವಿಚಾರಧಾರೆಯನ್ನು ಸರಳವಾಗಿ ಅತ್ಯಂತ ವ್ಯಾಪಕವಾಗಿ ಪ್ರಸರಿಸುವ ಕಾರ್ಯ ಈಗ ಆಗಬೇಕಾಗಿದೆ. ಈ ನಿಟ್ಟಿನಲ್ಲಿ 'ಶ್ರೀರಾಮಾನುಜ ಭಾರತೀ' ಟ್ರಸ್ಟ್‌ನ ಒಂದು ಪ್ರಯತ್ನ. ಸರಳ ಹಾಗೂ ಆಕರ್ಷಕ ಶೈಲಿಯ ಸುಲಭ ಬೆಲೆಯ ಕೃತಿಗಳು ಈ ಸರಣಿಯಲ್ಲಿ ಪ್ರಕಟವಾಗುತ್ತಿವೆ.

ಈಗಾಗಲೇ ಶ್ರೀರಾಮಾನುಜ ಸೇವಾ ಟ್ರಸ್ಟ್, ಶ್ರೀಮದ್ರಾಮಾನುಜರ ಜೀವನಗಾಥೆ 'ಪ್ರಸನ್ನಾಮೃತ' ಹಾಗೂ ಶ್ರೀಮದ್‌ರಾಮಾನುಜರ ಗೀತಾಭಾಷ್ಯದ ಕನ್ನಡ ಅನುವಾದ ಮೂರು ಸಂಪುಟಗಳಲ್ಲಿ ಪ್ರಕಟಿಸಿ ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಮೌಲಿಕ ಕೊಡುಗೆಯಾಗಿ ನೀಡಿದೆ. ಈ ಸಾಲಿಗೆ ಇದೀಗ ಪ್ರಕಾಶನಗೊಳ್ಳುತ್ತಿರುವ 'ತಿರುಪ್ಪಾವೈ' ಕನ್ನಡ ಅನುವಾದ ಮತ್ತೊಂದು ಕೃತಿಶ್ರೀ. ತಮಿಳುನಾಡಿನ ಆಳ್ವಾರ್‌ಗಳ ದಿವ್ಯಾನುಭವವೇ ದಿವ್ಯಪ್ರಬಂಧ ಕೃತಿಶ್ರೇಣಿ. ಸದಾ ಭಗವಂತನ ಧ್ಯಾನದಲ್ಲೇ ಮುಳುಗಿದ್ದ ಆಳ್ವಾರ್‌ಗಳ ಪವಿತ್ರ ಜೀವನದ ರಸಾನುಭವ, ಈ ನಾಲ್ಕು ಸಾವಿರ ದಿವ್ಯ ಪ್ರಬಂಧಗಳು. ವೇದಗಳ ಸಾರ ಈ ಪ್ರಬಂಧಗಳಲ್ಲಿ ಅಡಗಿರುವುದರಿಂದ ಇದಕ್ಕೆ ದ್ರಾವಿಡವೇದವೆಂದು ಹೆಸರು ಬಂದಿದೆ. ಈ ನಾಲ್ಕು ಸಾವಿರ ದಿವ್ಯಪ್ರಬಂಧಗಳಲ್ಲಿ ಆಂಡಾಳ್ ಗೋದಾದೇವಿಯಿಂದ ರಚಿತವಾದ ತಿರುಪ್ಪಾವೈಗೆ ವಿಶೇಷಸ್ಥಾನ. ಪ್ರತಿನಿತ್ಯ ಶ್ರೀವೈಷ್ಣವ ಮನೆಮಂದಿರಗಳಲ್ಲಿ ಭಗವಂತನ ಮುಂದೆ ಮೊಳಗುವ ಶಾತ್ತುಮೊರೈಯ ಹಾಡುಗಳ ತಿರುಪ್ಪಾವೈಯ ಕೃತಿಗಳೇ.

ತಿರುಪ್ಪಾವೈಯ ತಮಿಳ್ ಪಾಶುರಗಳೇ ಈಗಾಗಲೇ ಹಲವು ಕವಿಗಳು ಕನ್ನಡಕ್ಕೆ ಅನುವಾದಿಸಿ ಉಪಕರಿಸಿದ್ದಾರೆ. ಈ ಸಾಲಿನಲ್ಲಿ ಶ್ರೀ ಅರ್ಚಕ ವೇಣುಗೋಪಾಲದಾಸ್ ರಚಿಸಿರುವ ಈ ತಿರುಪ್ಪಾವೈ ಕನ್ನಡ ಅನುವಾದ ಅಷ್ಟಪದಿ ಶೈಲಿಯಲ್ಲಿ ರಚನೆಯಾಗಿದೆ. ಶ್ರೀ ವೇಣುಗೋಪಾಲದಾಸ್ ಪರಮಭಕ್ತರು ವಿರಾಗಿಗಳು ಸದಾ ಶ್ರೀರಾಮನ ನಾಮಸ್ಮರಣೆಯೊಂದಿಗೆ ಜೀವನ ಸಾಗಿಸುತ್ತಿದ್ದಾರೆ. ಇವರಿಗೆ ಆಧ್ಯಾತ್ಮಿಕ ಕೃತಿಗಳ ಪ್ರಕಾಶನ ಒಂದು ಹವ್ಯಾಸ. ಈಗಾಗಲೇ ಹತ್ತಾರು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ತಮ್ಮ ಸ್ವಂತ ಸಂಪಾದನೆಯಲ್ಲಿ ಪ್ರಕಟಿಸಿದ್ದಾರೆ. ಈ ಸಾರ್ಥಕ ಕೈಂಕರ್ಯಕ್ಕಾಗಿ ಶ್ರೀಯುತರು ಅಭಿನಂದನಾರ್ಹರು.

ಶ್ರೀ ರಾಮಾನುಜ ಸೇವಾ ಟ್ರಸ್ಟ್‌ನ ಪ್ರಕಾಶನ ಈ ಕೃತಿ ಪ್ರಕಟಿಸಲು ಅನುಮತಿ ನೀಡಿದ ಶ್ರೀಯುತರಿಗೆ ಹೃತ್ಪೂರ್ವಕ ಅಭಿನಂದನೆಗಳು ನಮ್ಮ ಹಿಂದಿನ ಕೃತಿಗಳಂತೆಯೇ ಈ ಕೃತಿಯು ಜನಸಾಮಾನ್ಯರ ಬದುಕಿಗೆ ಬೆಳಕಾಗಿ ಭಗವಂತನನ್ನು ಕಾಣುವ ಕಿಂಡಿಯಾಗಿ ನಮ್ಮ ಜೀವನ ದೃಷ್ಟಿಗೆ ಹೊಸ ಆಯಾಮ ನೀಡಿದರೆ ಟ್ರಸ್ಟ್‌ನ ಸೇವೆ ಸಾರ್ಥಕ.

'ಪ್ರಮಾಥಿ ಮಾರ್ಗಶಿರಶುಕ್ಲ ಪ್ರಥಮ'
23-12-1999

ಶ್ರೀ ರಾಮಾನುಜದಾಸ
ಶ್ರೀ ತಿರು ಐಯ್ಯಂಗಾರ್






ಶ್ರೀ

# ಭಕ್ತಿಪಂಥದ ಹರಿಕಾರರುಗಳಾದ

### *ಸಂತಶ್ರೇಷ್ಠ ಆಳ್ವಾರರುಗಳು*

ಮಕ್ಕಳಿಗೆ ಮಾರ್ಗದರ್ಶನ ನೀಡಲು ಶ್ರೀ ಹರಿಯು ನಾನಾವತಾರಗಳನ್ನು ಎತ್ತಿ ಬರುತ್ತಿರುತ್ತಾನೆ. ಹೀಗೆ ಬಂದ ಅವನ ವಿಭವಾವತಾರಗಳಲ್ಲಿ ಆಳ್ವಾರ್‌ರುಗಳ ಅವತಾರವೂ ಒಂದು. ಪ್ರಾತಃ ಸ್ಮರಣೀಯರಾದ ಈ ಆಳ್ವಾರರುಗಳ ಅವತಾರ ತಮಿಳುನಾಡಿನ ವಿವಿಧ ಪುಣ್ಯಸ್ಥಳಗಳಲ್ಲಿ, ಅವೆಲ್ಲವೂ ಇಂದು ನಮಗೆ ತೀರ್ಥ ಕ್ಷೇತ್ರಗಳಾಗಿವೆ. ಆಳ್ವಾರ್ ಎಂಬ ತಮಿಳುಪದಕ್ಕೆ 'ಆಳಮುಳುಗಿದವರು' ಎಂದು ಅರ್ಥ. ಈ ಎಲ್ಲ ಸಂತರೂ ಭಗವದ್ಭಕ್ತಿಯಲ್ಲಿ ಆಳ ಮುಳುಗಿದವರು. ಭಕ್ತಿ ಸಾಮ್ರಾಜ್ಯದ ಸ್ಥಾಪಕರು. ಆಳ್ವಾರ್‌ಗಳ ಲೋಕ ಭಕ್ತಿಲೋಕ. ಭಕ್ತ ಮನವನ್ನು ಆಳುವವರು. ಈ ಆಳ್ವಾರ್‌ಗಳು ಒಟ್ಟು 12 ಜನರು ಇವರುಗಳ ರಚನೆಗಳನ್ನು 'ದಿವ್ಯ ಪ್ರಬಂಧಗಳು' ಎಂದೂ 'ದ್ರಾವಿಡ ವೇದವೆಂದೂ' ಕರೆಯುತ್ತಾರೆ. ಈ ಆಳ್ವಾರ್‌ಗಳನ್ನು "ದಿವ್ಯಸೂರಿ"ಗಳೆಂದೂ ಸ್ತುತಿಸುತ್ತಾರೆ. ಇವರ ವೈಶಿಷ್ಟ್ಯತೆ, ಸಂಸ್ಕೃತ ವೇಧ ಇತಿಹಾಸಗಳನ್ನೆಲ್ಲ, ಸಾಮಾನ್ಯ ಜನತೆಯ ಆಡು-ಹಾಡು ಭಾಷೆಯಲ್ಲಿ, ಸರಳವಾಗಿ ಹಾಡಿ ತಮ್ಮ ಭಗವದನುಭವದ ಭಾವೈಕ್ಯತೆಯನ್ನು ತರುವುದೇ ಆಗಿದೆ. ಭಗವದ್ವಾಣಿಯಂತೆ ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ, ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ - ಧರ್ಮ ಸಂಸ್ಥಾಪನೆಗಾಗಿ ಭಗವಂತನ ಅವತಾರ ಈ ಜಗತ್ತಿನಲ್ಲಿ ನಡೆಯುತ್ತಲೇ ಇದೆ. ತಮದ ಗಂಟಲನ್ನು ಸೀಳಿ ಬರುವ ಸೂರ್ಯೋದಯದಂತೆ ಈ ಅವತಾರಗಳಲ್ಲಿ ಪರ, ವ್ಯೂಹ, ವಿಭವ, ಹಾರ್ದ್ರ ಮತ್ತು ಅರ್ಚನ - ಈ ಐದು ಮುಖ್ಯವಾದವು. ಶ್ರೀವೈಕುಂಠದಲ್ಲಿ ಭಗವಂತನ ದಿವ್ಯಸ್ವರೂಪ ಪರತ್ವ - ವಾಸುದೇವ, ಪ್ರದ್ಯುಮ್ನ, ಸಂಕರ್ಷ್ಣ ಅನಿರುದ್ಧ - ಈ ನಾಲ್ಕೂ ವ್ಯೂಹಾವತಾರ.

"ಮತ್ಸ್ಯ ಕೂರ್ಮೋವರಾಹಶ್ಚ ನೃಸಿಂಹೋ ವಾಮನಸ್ತಥಾ
ರಾಮೋರಾಮೋರಾಮಶ್ಚ ಕೃಷ್ಣ ಕಲ್ಕಿ ತಥೈ : ವಚ"

ಎಂಬ ದಶಾವತಾರ, ವಿಭವಾವತಾರ, ನಾಲ್ಕನೆಯ ಹಾರ್ದ್ರಾವತಾರ ಎಲ್ಲರ ಹೃದಯ ಕಮಲದಲ್ಲಿರುವ ಪರಮಾತ್ಮನ ದಿವ್ಯ ಸ್ವರೂಪ. ಐದನೆಯ ಅರ್ಚವತಾರ ಸಹಸ್ರಾರು ತೀರ್ಥಕ್ಷೇತ್ರಗಳಲ್ಲಿ ಅರ್ಚಾರೂಪವಾಗಿ ವಿಜಯಮಾಡಿಸಿರುವ ದಿವ್ಯಮಂಗಳ ವಿಗ್ರಹಗಳು, ಸ್ವಯಂಭು ರೂಪಗಳು.

ಈ ಐದೂ ಅವತಾರಗಳ ಜೊತೆಗೆ ಭಗವಂತನ ಮತ್ತೊಂದು ಸಂಕಲ್ಪಾವತಾರವೇ ನಿತ್ಯಸೂರಿಗಳ ಅವತಾರ. ಭಗವಂತನ ಆಯುಧಗಳನ್ನೂ ಅಲಂಕಾರಗಳನ್ನೂ ಒಂದೊಂದು ರೂಪವಾಗಿ 'ಸೃಷ್ಟಿಸಿ ಈ ಕಲಿಯುಗದಲ್ಲಿ ಭಕ್ತಿ ಸಾಮ್ರಾಜ್ಯವನ್ನು ಸ್ಥಾಪಿಸಿ ದಿವ್ಯ ಪ್ರಬಂಧಗಳ ಅವತಾರಕ್ಕೆ ಕಾರಣರಾದ ಆಳ್ವಾರರುಗಳು ನಿರಂತರವಾಗಿ ನಮ್ಮೆಲ್ಲರ ಪ್ರಾತಃಸ್ಮರಣೀಯರಾಗಿದ್ದಾರೆ.

ನಮ್ಮ ಗುರು ಪರಂಪರೆಯಲ್ಲಿ ಮೊದಲಿಗರು ನಾಥಮುನಿಗಳು. ಎರಡನೆಯವರು ಶ್ರೀಯಾಮುನ ಮುನಿಗಳು ಈ ಗುರು ಪರಂಪರೆಯಲ್ಲಿ ಶ್ರೀರಾಮಾನುಜರು ಶಿಖರಸ್ಥಾನದಲ್ಲಿ ಕಂಗೊಳಿಸುತ್ತಿದ್ದಾರೆ. ಪಾಲ್ಗಡಲಲ್ಲಿ ಅರಳಿದ ಕಮಲವನ್ನು ವಿಶ್ವಕ್ಕೇ ತಂದುಕೊಟ್ಟವರು, ಶ್ರೀರಾಮಾನುಜರು. ಆಳ್ವಾರ್‌ಗಳ ಪರಂಪರೆಯಲ್ಲಿ ಶ್ರೀ ಶಠಗೋಪರು ಭಗವಂತನ ಶ್ರೀಚರಣ ಸ್ಥಾನೀಯರು. ಆದ್ದರಿಂದಲೇ ಈ ಶ್ರೀಚರಣವನ್ನೇ ಎಲ್ಲ ಶ್ರೀವೈಷ್ಣವ ದೇವಾಲಯಗಳಲ್ಲಿ 'ಶಠಾರಿ' ಎಂಬ ಅಂಕಿತದಲ್ಲಿ ನಮ್ಮ ಶಿರಸ್ಸುಗಳಲ್ಲಿ ಧರಿಸುತ್ತೇವೆ. ಆಳ್ವಾರ್‌ಗಳು ಪೊಯ್ಗೈ ಆಳ್ವಾರ್, ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುವಳಿಶೈಳ್ವಾರ್, ನಮ್ಮಾಳ್ವಾರ್, ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಿಆಳ್ವಾರ್, ಮಧುರಕವಿ, ತಿರುಮಂಗೈಆಳ್ವಾರ್.

ಮೊದಲಾಳ್ವಾರ್ : ಪೊಯಿಪೈ ಆಳ್ವಾರ್, ಪೂದತ್ತಾಳ್ವಾರ್ ಮತ್ತು ಪೇಯಾಳ್ವಾರ್ ಇವರುಗಳನ್ನು ಮೊದಲಾಳ್ವಾರ್ ಎಂದು ಕರೆಯುವುದು ವಾಡಿಕೆ.

1) ಪೊಯಪೈ ಆಳ್ವಾರ್ : ದ್ವಾಪರಯುಗದ ಕಡೆಯಲ್ಲಿ ಅವತರಿಸಿದರು. ಕಾಂಚೀ ಇವರ ಅವತಾರಕ್ಷೇತ್ರ. ತುಲಾಮಾಸದ ಶರಣ ನಕ್ಷತ್ರ ಇವರದ್ದು. ಪಾಂಚಜನ್ಯ ಅಂಶ. ಮೊದಲೆ ತಿರುವಂದಾದಿ ನೂರು ಪಾಶುರಗಳು ಇವರ ಕೃತಿ.

2) ಪೊದತ್ತಾಳ್ವಾರ್ : ಇವರು ತಿರುಕಡಲ್‌ಮಲ್ಲೈ (ಮಹಾಬಲಿಪುರಂ) ಪುಣ್ಯಕ್ಷೇತ್ರದಲ್ಲಿ ಅವತಾರ. ತುಲಾಮಾಸದ ಧನಿಷ್ಟ ನಕ್ಷತ್ರದಂದು ಭಗವಂತನ ಕೌಮೋದಕೀ ಎಂಬ ಗಧಾಯುದದ ಅಂಶವಾಗಿ ಅವತರಿಸಿದವರು. ಇವರ ಕೃತಿ ಎರಡನೆಯ ತಿರುವಂದಾದಿ ನೂರು ಪಾಶುರಗಳು.

3) ಪೇಯಾಳ್ವಾರ್ : ಇವರು ತುಲಾಮಾಸದ ಪೂರ್ವಾಭಾದ್ರ ನಕ್ಷತ್ರದಲ್ಲಿ ಮಯಿಲಾಪುರಂನ ಆದಿಕೇಶವಪೆರುಮಾಳ್ ಸನ್ನಿಧಿಯಲ್ಲಿ ಸರಸ್ಸಿನಲ್ಲಿ ಅವತರಿಸಿದರು. ಸದಾ ಭಗವಂತನ ಧ್ಯಾನದಲ್ಲೇ ಇದ್ದುದರಿಂದ ಪೇಯಾಳ್ವಾರ ಎಂದು ಹೆಸರು ಇವರಿಗೆ 'ಭ್ರಾಂತಯೋಗಿ' 'ಮಹದಾಹ್ವ' ಯೋಗಿ ಎಂಬ ಹೆಸರೂ ಇದೆ. ಭಗವಂತನ ನಂದಕ ಖಡ್ಗದ ಅಂಶ ಮೂರನೆಯ ತಿರುವಂದಾದಿ ನೂರು ಪಾಶುರಗಳು ಇವರು ಬೆಳಗಿದ ಕೃತಿ ಜ್ಯೋತಿ.

ಈ ಮೂರು ಜನ ಒಂದೇ ಸ್ಥಳದಲ್ಲಿ ಭಗವಂತನನ್ನು ಸಾಕ್ಷಾತ್ಕರಿಸಿಕೊಂಡು ಮಹಿಮಾವಂತರು.

4) ತಿರುವಳಿಶೈಯಾಳ್ವಾರ್ : ಇವರು ತೈಮಾಸದ ಮಖಾನಕ್ಷತ್ರದಲ್ಲಿ ಭಗವಂತನ ಚಕ್ರವಾದ ಶ್ರೀ ಸುದರ್ಶನಾಳ್ವಾರ್‌ರ ಅಂಶವಾಗಿ 'ಮಹೀಸಾರಕ್ಷೇತ್ರ'ವಾದ ತಿರಮಳಿಶೈ ಕ್ಷೇತ್ರದಲ್ಲಿ ಅವತರಿಸಿದರು. ಆಗಲೇ ಶ್ರೀ ಜಗನ್ನಾಥಸ್ವಾಮಿ ದೇವಿಸಹಿತ ದರ್ಶನ ನೀಡಿ ಕಟಾಕ್ಷಿಸಿದರು. ಇವರು 120 ಪಾಶುರಗಳಾದ 'ತಿರುಚಟ್ಚಂದವಿರುತ್ತಮ' ಹಾಗೂ 96 ಪಾಶುರಗಳಾದ ನಾನ್ಮುಹನ್ ತಿರುವಂದಾದಿಗಳಿಂದ ತಾವು ಅನುಭವಿಸಿದ ಭಗವದನುಭವಸಾರ ನೀಡಿದ್ದಾರೆ.

5) ನಮ್ಮಾಳ್ವಾರ್ ; ಪಾಂಡ್ಯ ಮಣ್ಡಲದ ತಾಮ್ರಪರ್ಣಾ ನದೀ ತೀರದ ತಿರುನಗರಿ ಅಥವಾ ತಿರುಕ್ಕುರುಹೂರ್ ದಿವ್ಯ ಕ್ಷೇತ್ರದಲ್ಲಿ ಭಗವಂದಂಶ,

ಶ್ರೀ ಕೌಸ್ತುಭಾಂಶ ಹಾಗೂ ಶ್ರೀಸೇನ್‌ನಾಥರ ಅಂಶವಾಗಿರ ವೈಶಾಖ ಮಾಸ ವಿಶಾಖಾ ನಕ್ಷತ್ರದಲ್ಲಿ ಅವತಾರ. ಹುಟ್ಟಿದೊಡನೆ ಅಜ್ಞಾನದಾತ ವಾಯು 'ಶಠಂ' ಸ್ಪರ್ಶವಾಗದಂತೆ ಹೂಂಕರಿಸಿ ತಡೆದದ್ದರಿಂದ ಇವರು ಶಠಗೋಪರ್. ಶ್ರೀರಂಗನಾಥರ ಹಾಗೂ ಇತರ ಆಳ್ವಾರ್‌ಗಳ ಪ್ರೀತಿಗೆ ಕಾರಣರಾಗಿ ಭಕ್ತಮನದ ನಮ್ಮಾಳ್ವಾರ್, ಆಳ್ವಾರ್ ತಿರುನಗರಿಯ ನಾಥ ಶ್ರೀಪೊಲಿಸ್ತು ನಿನ್ರಪಿರಾನ್ ಅನುಗ್ರಹಿಸಿದ ವಕುಳಮಾಲಾ ಭೂಷಣರಾಗಿದ್ದ ಇವರು 'ವಕುಳಾಭರಣರ್', ಅಹಂಕಾರ ಮದಗಜಕ್ಕೆ ಪರಾಂಕುಶರ್, ತಿರುವಿರುತ್ತಮ್ (100 ತಿರುವಾಶಿರಿಯಂ(7)), ಪೆರಿಯ ತಿರುವಂದಾದಿ (87), ತಿರುವಾಯ್‌ಮೊಳಿ (1102) ಇವರ ನಿತ್ಯನೂತನ ಕೃತಿ ವೈಭವಗಳು.

6) ಮಧುರಕವಿ ಆಳ್ವಾರ್ : ತಿರುಕ್ಕೊಳೂರ್‌ನಲ್ಲಿ ಚೈತ್ರ ಮಾಸ ಚಿತ್ತಾ ನಕ್ಷತ್ರದಲ್ಲಿ ಭಗವಂತನ ಗದೆ ಕೌಮೋದಕೀ ಅವತಾರಾಂಶ ಇವರ ಕಣ್ಣಿನುಣ ಶಿರುತ್ತಾಂಬು, ನಮ್ಮಾಳ್ವಾರ್ ನಮನ ಸುಂದರ ಕಾಣಿಕೆಗಳು.

7) ಕುಲಶೇಖರಾಳ್ವಾರ್ ; ಕೋಳಿಕ್ಕೋಡ್ ಎಂಬ ಕೇರಳ ಪ್ರಾಂತದ ರಾಜಧಾನಿಯಲ್ಲಿ ಮಾಶಿರಮಾಸ ಪುನರ್ವಸು ನಕ್ಷತ್ರದಲ್ಲಿ ಶ್ರೀಕೌಸ್ತುಭಾಂಶವಾಗಿ ಈ ರಾಜಕುಮಾರರ ಅವತಾರ. ಶ್ರೀರಾಮನ ಪರಮಭಕ್ತರು. ಶ್ರೀರಂಗಾಂತರಂಗ ಅರಿತ ಮಹಾನ್ ಪೆರುಮಾಳ್ ತಿರುಮೊಳಿ (103) ಇವರ ಕೃತಿ ರತ್ನ. ಇವರ ಸಂಸ್ಕೃತದ ಶ್ರೀ ಮುಕುಂದಮಾಲೆ, ಶ್ರೀಕೃಷ್ಣನಿಗೆ ಅರ್ಪಿಸಿದ ಭಕ್ತಿಮಾಲೆ.

8) ಪೆರಿಯಾಳ್ವಾರ್ : ಪಾಂಡ್ಯ ಮಂಡಲದ ಶ್ರೀ ವಿಲ್ಲಿಪುತ್ತೂರಿನಲ್ಲಿ ಆನಿ ಮಾಸದ ಸ್ವಾತಿ ನಕ್ಷತ್ರದಶ್ರೀ ವೈನತೆಯಾಂಶವಾಗಿ ಅವತಾರ ಆಂಡಾಳ್‌ರ ಸಾಕುತಂದೆ ಆದ್ದರಿಂದ ಶ್ರೀರಂಗನಾಥಗೆ ಮಾವ ತಿರುಪ್ಪಲ್ಲಾಂಡ್ (12), ಪೆರಿಯಾಳ್ವಾರ್ ತಿರುಮೊಳಿ (473) ಇವರ ಕೃತಿ.

9) ಅಣ್ಡಾಳ್ :ಪಾಂಡ್ಯ ಮಂಡಲದ ಶ್ರೀವಿಲ್ಲಿಪುತ್ತೂರಿನಲ್ಲಿ ಶ್ರೀ ಪೆರಿಯಾಳ್ವಾರ್‌ರ ನಂದನದಲ್ಲಿ ಶ್ರೀದೇವಿ-ಭೂದೇವಿ ಅಂಶವಾಗಿ ಆಡಿಮಾಸ ಪೂರ್ವಫಲ್ಗುಣೀ ನಕ್ಷತ್ರದಲ್ಲಿ ಅವತಾರ ಬಾಲ್ಯದಲ್ಲೇ ಶ್ರೀರಂಗನಾಥಗೆ ಶೂಡಿಕೊಡುತ್ತ ಶುಡರ್‌ಕೊಡಿಯಾಗಿ ತನ್ನ ತಿರುಪ್ಪಾವೈ (30), ನಾಚ್ಚಿಯಾರ್ ತಿರುಮೊಳಿ (142) ಪೂಮಾಲೈ ಪಾಮಾಲೈಗಳಿಂದ ಅವನನ್ನೇ ವರಿಸಿಕೊಂಡ ಈ ಗೋದಾದೇವಿಯ ಆದರ್ಶ ಅಪೂರ್ವ ತನ್ನೊಡನೆ ಮಿಕ್ಕೆಲ್ಲರನ್ನೂ ಉದ್ಧರಿಸಿದ ಮಮತೆಯ ಮಾತೆ.

10) ತೊಂಡರಪ್ಪೊಡಿಯಾಳ್ವಾರ್ : ಚೋಳನಾಡಿನ ತಿರುವಂಡಂಗುಡಿಯಲ್ಲಿ ಮಾರ್ಗಳಿ ಮಾಸದಲ್ಲಿ ವೈಜಯಂತೀ (ವನ) ಮಾಲಾ ಅಂಶದಲ್ಲಿ ಅವತಾರ. ತಿರುಮಾಲೈ (45) ತಿರುಪ್ಪಳ್ಳಿಯೆಳುಚ್ಚಿ (10) ಹಾಗೂ ಇತರ ಶರಣಾಗತಿ ಕೃತಿರತ್ನಗಳನ್ನಿತ್ತ ಮಹಾತಪಸ್ವಿ.

11) ತಿರುಪ್ಪಾಣಿ ಆಳ್ವಾರ್ : ಚೋಳನಾಡಿನ ಉರೈಯಾರ್‌ನಲ್ಲಿ ಕಾರ್ತ್ತಿಕೈ ಮಾಸದ ರೋಹಿಣೀ ನಕ್ಷತ್ರದಲ್ಲಿ ಶ್ರೀವತ್ಸಾಂಶವಾಗಿ ಅವತರಿಸಿ ಶ್ರೀರಂಗನಾಥನ ದರ್ಶನಕ್ಕಾಗಿಯೇ ಹಾಡಿ ಕಾತರಿಸಿ 'ಅಮಲನಾದಿಪಿರಾನ್' ಶ್ರೀ ರಾಮಾನುಜದಾಸ (10 ಪಾಶುರಗಳು)ನಲ್ಲೇ ಐಕ್ಯರಾದ ದಿವ್ಯ ಮಹಾನ್ ಜ್ಯೋತಿ.

12) ತಿರುಮಂಗೈಯಾಳ್ವಾರ್ : ಚೋಳ ನಾಡಿನ ತಿರುಕ್ಕುರೈಯಲೂರ್‌ನಲ್ಲಿ ರಾಜ ಸೇನಾಧಿಪತಿಯ ಕುಮಾರರಾಗಿ ಕಾರ್ತ್ತಿಕೈ ಮಾಸದ ಕೃತ್ತಿಕಾ ನಕ್ಷತ್ರದಲ್ಲಿ ಅವತಾರ. ಭಗವಂತನ ಶಾರ್ಙ್ಗ ಅಂಶ. ಕ್ಷೇತ್ರ ಕೈಂಕರ್ಯ ಅನುಪಮ. ಪೆರಿಯ ತಿರುಮೊಳಿ(1084), ತಿರುಕ್ಕುರುಂತಾಂಡಹಮ (20) ತಿರುನೆಡುಂತಾಂಡಹಮ್ (30), ತಿರುವೆಳೂರ್ ತಿರುಕ್ಕ (1), ಶಿರಿಯ ತಿರುಮಡಲ್ (78), ಪೆರಿಯ ತಿರುಮಡಲ್ (149) ಇವರ ಅಮರ ಕೃತಿಗಳು.

ಹೀಗೆ ಆಳ್ವಾರ್‌ಗಳು ಜನ ಸಾಮಾನ್ಯರಲ್ಲಿ ಭಗವದನುಭವ ಹರಡಿ ರಾಷ್ಟ್ರೀಯ ಭಾವೈಕ್ಯತೆ ಸರಳ ಆಡು ಹಾಡು ಭಾಷೆಯಲ್ಲಿ ತಂದಿರುವ ಆದರ್ಶ ಸದಾ ಸಾರ್ವಕಾಲಿಕ.

ಇಂತಹ ಸಾಹಿತ್ಯ ಕ್ಷೀರಸಾಗರವನ್ನು ಕರುನಾಡಿಗೆತಂದ ಮಹಾಯೋಗಿ ಶ್ರೀರಾಮಾನುಜರು. ಈ ಕ್ಷೀರಸಾಗರದಲ್ಲಿ ಪಯಣಿಸುವುದೊಂದು ಮಹದಾನುಭವ. ಇದನ್ನು ಅಂದಿನಿಂದ ಇಂದಿನವರೆಹಿಗೂ ಅನುಭವಿಸಿ ಆನಂದಿಸುತ್ತಾ ಬಂದಿರುವ ಪರಮ ಭಕ್ತರು ಅಸಂಖ್ಯಾತ. ಇವರ ಮಾರ್ಗದರ್ಶನ ನಮಗಿರುವುದೊಂದು ನಮ್ಮೆಲ್ಲರ ಪುಣ್ಯ ವಿಶೇಷ. ಈ ಕ್ಷೀರಸಾಗರದಲ್ಲಿರುವ ಅಮೃತವನ್ನು ನಮಗಿತ್ತ ಅನೇಕ ಮಹನೀಯರನ್ನು ನಾವಿಂದು ಸ್ಮರಿಸುತ್ತಾ ಆನಂದಭಾಷ್ಪಗಳಿಂದ ಅವರ ಶ್ರೀಚರಣಗಳಲ್ಲಿ ನಮ್ಮ ನಮನಗಳನ್ನು ಅರ್ಪಿಸುವ.

ಈ ಕ್ಷೀರಸಾಗರದ ಅನರ್ಘ್ಯ ರತ್ನಮಾಲೆ ಶ್ರೀ ಗೋದಾದೇವಿ ರಚಿಸಿರುವ ತಿರುಪ್ಪಾವೈ ಮತ್ತು ವಾರಣಮಾಯಿರಂ, ಮಾತೆ ತನ್ನ ಮಕ್ಕಳಿಗೆ ಮಾತು ಕಲಿಸುವಂತೆ, ಕೇಳಿ ನಲಿಯುವ ಮಾತೆಯಾಗಿ ಹರಸುತ್ತಿರುವ ಗೀತಮಾಲೆ; ಮಕ್ಕಳ ತೊದಲು ಭಾಷೆಯನ್ನು ಕೇಳಿ ಆನಂದಿಸಿ ಹರಸುವ ಈ ಮಾತೆಯೇ ನಮ್ಮ ಭಾರತಮಾತೆ ಎಂದರೆ ಅತಿಶಯೋಕ್ತಿಯಲ್ಲ. ಈ ಕೃತಿಯನ್ನು ಮಾತೆಯ ದಿವ್ಯಾಶೀರ್ವಾದದಿಂದ, ಸರಳ ಸುಂದರ ಕನ್ನಡ ಭಾಷೆಯಲ್ಲಿ, ಸಂಗೀತಕ್ಕೂ ಅಳವಡಿಸಿಕೊಂಡು ಆನಂದದಿಂದ ಹಾಡಲನುವಾಗುವಂತೆ ಅಷ್ಟಪದಿಯಲ್ಲಿ ರಚಿಸಿದ್ದಾರೆ, ತನ್ಮಯರಾಗಿ. ಇವರ ಎಲ್ಲ ರಚನೆಗಳನ್ನೂ ಓದಿ, ಓದಿಸಿ ಕೇಳಿ, ಆನಂದಿಸಿ, ಬೆನ್ನುತಟ್ಟಿ ಪ್ರೋತ್ಸಾಹಿಸುತ್ತಾ ಬಂದಿರುವ, ಪ್ರಾತಃಸ್ಮರಣೀಯರುಗಳಾದ ಶ್ರೀ ರಾಮಾನುಜ ದಿವ್ಯಾಜ್ಞಾನಪರಿಪಾಲಕರಾದ ಬೆಂಗಳೂರಿನ 'ಆದರ್ಶ ಸಮೂಹ ಸಂಸ್ಥೆಗಳ ಕುಲ ಸಚಿವರಾದ' ಶ್ರೀ ತಿರು ಅಯ್ಯಂಗಾರ್‌ರವರು ಹಾಗೂ ಅವರೆಲ್ಲ ಬಳಗ ಜೊತೆಗೆ ತಿರುಮಲೇಶನ ಸನ್ನಿಧಾನ ಸೇವಾನಿರತರಾಗಿ ಜನ್ಮಸಾರ್ಥಕ್ಯಗಳಿಸಿಕೊಂಡಿರುವ, ಸ್ವತಃ ಸಾಹಿತ್ಯ ಭಂಡಾರವಾಗಿರುವ, ಬೆಂಗಳೂರು ಪದ್ಮನಾಭನಗರದ 'ಶ್ರೀ ಆದ್ಯ ರಾಮಾಚಾರ್ಯರು ಎಂದು ಆನಂದಭಾಷ್ಪ ಪೂರಿತರಾಗಿ ತಮ್ಮನ್ನು ತಾವೇ ಮರೆಯುವ ಈ ಕೃತಿಯ ರಚನೆಕಾರರು ಶ್ರೀ ವೇಣುಗೋಪಾಲದಾಸರು. ಈ ಕೃತಿಯನ್ನು ಓದಿ ಮನನ ಮಾಡುವ ಸಮಸ್ತ ಭಕ್ತವೃಂದಕ್ಕೂ ಇಂತಹ ಸುತ್ಯಕಾರ್ಯಮಾಡಿದ ಶ್ರೀ ವೇಣುಗೋಪಾಲದಾಸರಿಗೂ ಮಾತೆಯ ಮಮತೆಯ ಆಶೀರ್ವಾದ ಸದಾ ಇರಲೆಂದು ಹಾರೈಸುವ'

'ಪ್ರಮಾಥಿ ಮಾರ್ಗಶಿರಶುಕ್ಲ ಪ್ರಥಮ' "ರಾಮಾನುಜ ದಾಸನ್"

ಬೆಂಗಳೂರು 23-12-1999

# ಪುಷ್ಪ ವೃಷ್ಠಿಯ ಕರೆಯಿರೇ



ಪುಷ್ಪ ವೃಷ್ಠಿಯ ಕರೆಯಿರೇ ನಮ್ಮ
ವೈರಮುಡಿ ವೈಭವದ ಲೋಕೈಕನಾಥನಿಗೇ ॥ ಪ ॥

ಶ್ರೀದೇವಿ ಭೂದೇವಿ ಶೃಂಗಾರ ಮೂರುತಿಗೆ
ಗರುಡಗಮನ ನಮ್ಮ ಪಲ್ಲವೋತ್ಸವ ಪ್ರಿಯ ಅಪ್ರಮೇಯನಿಗೆ ॥ ಅ ಪ ॥

ಭಾಷ್ಯಕಾರರಿಗೊಲಿದ ಬೀಬಿನಾಚ್ಯಾರು ಮನದನ್ನ
ವಿಷ್ಣುಚಿತ್ತರ ಬಾಳ ಬಂಗಾರ ಶೃಂಗಾರ ಶೀಲನಿಗೆ
ಮಲ್ಲೆ ಜಾಜಿ ಒಳ್ಳೆ ಸಂಪಿಗೆ ಸೊಂಪಾದ ಮನತುಂಬಿ
ಮಂಗಳಾಂಗಿಯರೇ ಬೇಕ ಪುಷ್ಪವೃಷ್ಠಿಯ ಕರೆಯಿರೇ ॥ ೧ ॥

ಇಂದ್ರಪ್ರಸ್ಥದಿ ಯತಿರಾಜಗೊಲಿದಾಡಿ ಬಂಧವಗೇ
ನರನ ಕಾಯ್ದವಗೆ ನರಹರಿಗೆ ನಳಿನನಾಭನಿಗೇ
ಸಿರಿಗೋದನಾಚ್ಯಾರು ಮನದನ್ನ ಅಂಗಮಣಿ ರಂಗನಿಗೆ
ಲೋಕಮೋಹಕ ನಮ್ಮ ಚೆಲುವ ನಾರಾಯಣಗೇ ॥ ೨ ॥

ಕರುನಾಡ ವೈಕುಂಠ ದಕ್ಷಿಣದ ಬದರಿ ವೇದಾದ್ರಿವಾಸನಿಗೇ
ವೈಷ್ಣವಾಗಮಾನುತ ಚರಿತ ವೈರಮುಡಿ ವೈಭವದ ಪುಷ್ಕರಾಕ್ಷನಿಗೆ
ಭಕ್ತವತ್ಸಲನೆಂಬ ಬಿರುದಾಂಕಿತ ನಮ್ಮ ನಿತ್ಯೋತ್ಸವ ಪ್ರಿಯಗೇ
ದಾಸಗೋಪಾಲನಾ ತಂದೆ ಯಾದವಾದ್ರೀಶ ಚೆಲ್ವ ನಾರಾಯಣಗೇ ॥ ೩ ॥

# ಏನಿದೀ ನಿನ್ನ ಚದುರಂಗದಾಟ

ಏನಿದೇನಿದೀ ನಿನ್ನ ಚದುರಂಗದಾಟವು ರಂಗ
ಯಾದವಚಲವಾಸ ತಿರುಶೆಲ್ವ ನಾರಾಯಣ ॥ ಪ ॥



ಕೋಟಿ ಶತಕೋಟಿ ಜೀವಿಜೀವಿಗಳ ಬರೆಯುತಿರುವೆ
ಮತ್ತೆ ಬರೆದೆಲ್ಲ ಚಿತ್ರಗಳ ತಿದ್ದಿತಿದ್ದುತ ಅಳಿಸುತಿರುವೆ ॥ ಅ ಪ ॥

ಕುದುರೆಕಾಲಾಳು ಆನೆಗಳ ಆರ್ಭಟದ ಹೋರಾಟಗಳ ಆಟ
ನೋವು ನಲಿವಿನ ರಂಗರಂಗಿನ ಚದುರಂಗದ ರಂಗಿನಾಟ
ಮೋಹಮಮತೆಯ ಅನುಬಂಧಗಳ ಷಡ್ರಂಗಗಳೊಡನಾಟ
ನೀರೊಕೆನ್ನೀರೊ ಜೊತೊಜೊತೆಗೆ ಪನ್ನೀರ ಸಾಗರದಿ ತೇಲಿಸುವಾಟ ॥ ೧ ॥



ಬೇಕುಬೇಕದು ಬೇಡಬೇಡವದೆಂಬ ತಾಕಲಾಟ ದೊಂಬರಾಟ
ಸಾಕು ಸಾಕೆನುತ ಸೋಲಿಸುತ ಸೋಲುವ ನಿನ್ನಾಟ
ಬೆಳಕು ಕತ್ತಲೆಯ ಆಟ ಬಿಟ್ಟು ಹಕ್ಕಿಯ ಹಿಡಿಯುವಾಟ
ಮತ್ತೆತ್ತಿ ಮುದ್ದಿಸುತ ಮಡಿಲಿನಾಸರೆ ನೀಡುವಾ ನಿನ್ನಾಟ ॥ ೨ ॥

ರಾಮರಾವಣರ ಆಟ ಕೃಷ್ಣಕಂಸರ ಆಟ ದಾಮೋದರನ ಆಟ
ಮಧುಕೈಟಭರ ಆಟ ಹಯವದನ ಶ್ರೀಹರಿಯೆ ಏನಿದೀ ನಿನ್ನಾಟ
ದಾಸಗೋಪಾಲ ವರದ ಸಿರಗೋದೆಯರಸನೇ ಶ್ರೀ ಶ್ರೀನಿವಾಸ
ಸಾಕೆನಗೆ ಈ ಆಟೋಟಗಳ ನೋಟ ನೀಡೆನಗೆ ನಿನ್ನೊಲವ ಒಡನಾಟ ॥ ೩ ॥

ಶ್ರೀಮತೇ ರಾಮಾನುಜಾಯ ನಮಃ

# ಶ್ರೀ ಯತಿರಾಜ ರಾಮನುಜ ಮಹಾ ಸಂಸ್ಥಾನಂ ಮಠ (ತಿರುನಗರಿ)

ನಂ. 15, 8ನೇ ಮುಖ್ಯ ರಸ್ತೆ, ಗೌರವ ನಗರ, ಜೆ.ಪಿ. ನಗರ 7 ನೇ ಹಂತ, ಬೆಂಗಳೂರು - 79.



ಓಂ ನಮೋ ನಾರಾಯಣಾಯಃ



## ಮಂಗಲಾ ಶಾಸನಂ

ಬೌದ್ಧಿಕ ಆಸೆ ಆಕಾಂಕ್ಷೆಗಳ ಮಾಯಾಜಾಲದಲ್ಲಿ ಸಿಲುಕಿ ಜೀವನದ ಪಾವಿತ್ರ್ಯತೆಯನ್ನು ಮರೆತು, ಜನನ ಮರಣಗಳ ಪ್ರವಾಹದಲ್ಲಿ ಕೊಚ್ಚಿ ಹೋಗುವ ಈ ಜೀವಾತ್ಮನನ್ನು ಎಚ್ಚರಿಸಿ, ರಜೋಗುಣ ತಮೋಗುಣಗಳ ಮುಷ್ಠಿಯಿಂದ ಬಿಡುಗಡೆ ಹೊಂದಿ, ಶ್ರೀಮನ್ನಾರಾಯಣನ ಸಾನ್ನಿಧ್ಯವನ್ನು ಪಡಿಯುವಂತೆ, ತಮ್ಮ ದಿವ್ಯ ಪಾಶುರಗಳಿಂದ ಕರೆ ನೀಡಿ ಎಚ್ಚರಿಸಿದ ಮಹಾನ್ ಸಂತರೇ ಆಳ್ವಾರರುಗಳು. ಇವರಲ್ಲಿ ಶ್ರೀ ಗೋಧಾದೇವಿ ಲಕ್ಷ್ಮೀ ಅಂಶ ಸಂಭೂತಳಾದ ಶ್ರೀ ವೈಷ್ಣವ ಕುಲಕಲ್ಪವಲ್ಲಿ, ಶ್ರೀ ವಿಷ್ಣು ಚಿತ್ತರಿಗೆ ಶ್ರೀತುಳಸೀ ವನದಲ್ಲಿ ದೊರಕಿ ಸಾಕು ಮಗಳಾಗಿ ಬೆಳೆದು, ಶ್ರೀ ರಂಗನಾಥನನ್ನೇ ತಾಮುಡಿದ ಮಾಲೆಯನ್ನಿತ್ತು ಒಲಿಸಿಕೊಂಡ ಶ್ರೀರಂಗನಾಥನನ್ನೇ ವರಿಸಿದ, ಪರಮ ಶ್ರೀ ವೈಷ್ಣವ ಭಾಗವತ ಶಿರೋಮಣಿ. ಶ್ರೀಮದ್ ಭಾಗವಲ್ಲಿ, ಕ್ಷೀರಸಾಗರಶಯನನಾದ ಕಮಲನಾಭನನ್ನು ಒಲಿಸಿಕೊಂಡಲ್ಲಿ, ಜನ್ಮ ಸಾರ್ಥಕ್ಯವನ್ನು ಪಡೆಯಬಹುದೆಂದು ಈ ರೀತಿ ವರ್ಣಿಸಲಾಗಿದೆ.

*ಶೃಣ್ವತಾಂ ಸ್ವಕಥಾ : ಕೃಷ್ಣ : ಪುಣ್ಯ ಶ್ರವಣ ಕೀರ್ತನಃ ।*
*ಹೃದ್ಯನ್ತ : ಸ್ಥೋಹ್ಯ ಭದ್ರಾಣಿ ವಿಧುನೋತಿ ಸುಹೃತ್ ಸತಾಮ್ ॥*
*ನಷ್ಟಪ್ರಾಯೇಷ್ವ ಭದ್ರೇಷು ನಿತ್ಯಂ ಭಾಗವತ ಸೇವಯಾ । ಭಗವತ್ಯುತ್ತಮ ಶ್ಲೋಕೇ ಭಕ್ತಿರ್ಭವತಿ ನೈಹಿಕೀ ॥*
*ತದಾ ರಜಸ್ತಮೋಭಾವಾ ಕಾಮಲೋಭಾದಯಶ್ಚಯೇ । ಚೇತ ಏತೈರ್ ಅನಾವಿದ್ದಂ ಸ್ಥಿತಂ ಸತ್ವೇ ಪ್ರಸೀದತಿ ॥*
*ಏವಂ ಪ್ರಸನ್ನ ಮನಸೋ ಭಗವದ್ಭಕ್ತಿಯೋಗತ । ಭಗವತ್ತತ್ವ ವಿಜ್ಞಾನಂ ಮುಕ್ತಸಂಗಸ್ಯ ಜಾಯತೇ ॥*
*ಭಿದ್ಯತೇ ಹೃದಯಗ್ರಂಥಿ : ಛಿದ್ಯಂತೇ ಸರ್ವಸಂಶಯಾ । ಕ್ಷೀಯನ್ತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ॥*

(ಮಣ್ಣು ತಿನ್ನುವ ನೆಪದಲ್ಲಿ ಮಾತೆಗೆ ಬಾಯಲ್ಲಿ ಬ್ರಹ್ಮಾಂಡವನ್ನೇ ತೋರಿದ ವಿಶ್ವಾತ್ಮ ವಿಶ್ವರೂಪಿಯಾದ ಯಶೋದಾನಂದನನ ಅದ್ಭುತ ಚರಿತ್ರೆಯನ್ನು ವೇದ ಸಾಹಿತ್ಯದಿಂದಲಾಗಲೀ, ಭಗವದ್ಗೀತೆಯ ಮೂಲಕವಾಗಲೀ ನೇರವಾಗಿ ಆತನ ಬಾಯಿಂದಲೇ ಕೇಳುವುದು ಪುಣ್ಯಕಾರ್ಯ. ತನ್ನ ವಿಷಯ ಕೇಳುವವರೆಲ್ಲರ ಹೃದಯಕಮಲಗಳಲ್ಲಿ ನೆಲಸಿರುವ ಶ್ರೀ ಕೃಷ್ಣನು ಪರಮ ಹಿತೈಷಿಯಾದ ಸ್ನೇಹಿತನಾಗಿ ನಡೆದುಕೊಳ್ಳುತ್ತಾನೆ. ಸದಾ ತನ್ನ ಲೀಲಾವಿನೋದಗಳನ್ನು ಕೇಳುವುದರಲ್ಲಿ ನಿತರಾದ ಭಕ್ತನನ್ನು ಪರಿಶುದ್ಧಗೊಳಿಸುತ್ತಾನೆ. ಈ ರೀತಿಯಲ್ಲಿ ಭಕ್ತನು ತನ್ನಲ್ಲಿ ಸುಪ್ತವಾಗಿರುವ ದಿವ್ಯ ಜ್ಞಾನವನ್ನು ಸಹಜ ರೀತಿಯಲ್ಲಿ ವೃದ್ಧಿಪಡಿಸಿಕೊಳ್ಳುತ್ತಾನೆ. ಭಾಗವತದಿಂದಲೂ, ಭಕ್ತರಿಂದಲೂ ದಾಮೋದರನ ಮಹಿಮೆಗಳನ್ನು ಕೇಳಿದಂತೆಲ್ಲಾ ವ್ಯಕ್ತಿಯು ಭಗವಂತನ ಭಕ್ತಿ ಸೇವೆಯಲ್ಲಿಯೇ ನಿಶ್ಚಲನಾಗಿ ಉಳಿಯುತ್ತಾನೆ. ಭಕ್ತಿಸೇವೆಯನ್ನು ಬೆಳೆಸಿಕೊಂಡಾಗ ಮನುಷ್ಯನು ರಜೋಗುಣ ತಮೋಗುಣಗಳಿಂದ ಬಿಡುಗಡೆ ಹೊಂದುತ್ತಾನೆ. ಹೀಗೆ ಐಹಿಕ ಕಾಮ ಮತ್ತು ಲೋಭಗಳು ನಶಿಸಿಹೋಗುತ್ತವೆ. ಈ ಮಾಲಿನ್ಯಗಳು ತೊಡೆದುಹೋದಾಗ

ಸಾಧಕನು ಪರಿಶುದ್ಧ ಸತ್ವ ಸ್ಥಿತಿಯಲ್ಲಿ ಪುಟವಿಟ್ಟ ಚಿನ್ನದಂತೆ ಸ್ಥಿರನಾಗುತ್ತಾನೆ. ಭಕ್ತಿ ಸೇವೆಯಿಂದ ಜಡತೆಯನ್ನು ಕೊಡವಿ ಸಚೇತನನಾಗುತ್ತಾನೆ ಮತ್ತು ಭಗವಂತನ ವಿಜ್ಞಾನವನ್ನು ಪರಿಪೂರ್ಣವಾಗಿ ತಿಳಿದುಕೊಳ್ಳುತ್ತಾನೆ. ಹೀಗೆ ಭಕ್ತಿಯೋಗದಿಂದ ಅಸಂಶಯ ಸಮಗ್ರ ಸ್ಥಿತಿಗೆ ಅಂದರೆ ಪರಮ ಸತ್ಯಸ್ವರೂಪನಾದ ಶ್ರೀಮನ್ನಾರಾಯಣನನ್ನು ಅರ್ಥಮಾಡಿಕೊಳ್ಳುವ ಸ್ಥಿತಿಗೆ ಬರುವುದು ಸಾಧ್ಯವಾಗುತ್ತದೆ. (ಭಾಗವತ 1.2, 17-24;)

ಹೀಗೆ ಶ್ರೀಕೃಷ್ಣನಿಂದ ಅಥವಾ ಭಕ್ತಿ ಸಾಮ್ರಾಜ್ಯದೊಡೆಯರಾದ ಆಳ್ವಾರಾಚಾರ್ಯರುಗಳಿಂದ, ಶ್ರೀಕೃಷ್ಣನ ಲೀಲಾ ಮಹಿಮಾತಿಶಯಗಳನ್ನು ಅರ್ಥಮಾಡಿಕೊಳ್ಳುವುದು ಸರಿಯಾದ ದಾರಿಯಾಗಿದ್ದು, ಈ ನಿಟ್ಟಿನಲ್ಲಿ, ಈ ಕೃತಿ ಕೈದೀವಿಗೆ ಪಂಡಿತ ಪಾಮರರಾದಿಯಾಗಿ ನಾವುಗಳೆಲ್ಲರೂ,

*ಶ್ರವಣಂ ಕೀರ್ತನಂ ವಿಷ್ಣೋ : ಸ್ಮರಣಂ ಪಾದಸೇವನಮ್ ।*
*ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನವಹಿ ॥* (ಭಾಗವತ7.5.23)

ಹೀಗೆ ನವವಿಧ ಭಕ್ತಿಸೇವೆಯಿಂದ ಆ ಅಪ್ರಮೇಯನನ್ನು ಪಾಡಿಪೊಗಳಿ ಸೇವಿಸಿದಲ್ಲಿ, ಮಾತೆ ಮಡಿಲಿನಾಸರೆ ನೀಡಿ ಸಲಹುತ್ತಾನೆ. ಕಿರೀಟಗೊಲಿದಂತೆ ತನ್ನ ಸಾನ್ನಿಧ್ಯವನ್ನು ಕರುಣಿಸುತ್ತಾನೆ. ಕೃಷ್ಣೆಯ ಅಳಲನ್ನು ನೀಗಿಸಿದ ಅಕ್ಷಯ ಫಲದಾತನಾಗುತ್ತಾನೆ. ಕರಿರಾಜ, ಧ್ರುವರಿಗೊಲಿದಂತೆ ಗರುಡಗಮನನಾಗಿ ಓಡೋಡಿ ಬಂದು ಸಲಹುತ್ತಾನೆ. ಭಕ್ತಪ್ರಹ್ಲಾದನಿಗೊಲಿದ ಕೃಪಾಸಿಂಧುವಿನಂತೆ ಬರುತ್ತಾನೆ. ವಿದುರನಿಗೊಲಿದ ಗೋವಿಂದನಾಗಿ ಕರುಣೆಯ ಕ್ಷೀರಧಾರೆಯನ್ನೇ ತರುತ್ತಾನೆ. ಸುಧಾಮಹೃತ್ಕಮಲ ವಾಸನಲ್ಲವೇ ಶ್ರೀಕೃಷ್ಣ. ಜೀವಿತಕಾಲವಿಡೀ ನಮ್ಮ ಇರುವಿಗಾಗಿ ಸತತವಾಗಿ ಹೋರಾಡಬೇಕಾಗಿ ಬಂದಿರುವ ಈ ಕಾಲದಲ್ಲಿ, ಮನುಷ್ಯರಾದ ನಾವು ಕನಿಷ್ಟ ವರ್ಷದಲ್ಲಿ ಮಂಗಳ ಮಾರ್ಗಶಿರ ಮಾಸದಲ್ಲಿಯಾದರೂ, ವ್ರತವನ್ನಾಚರಿಸಿದರೂ ಸಾಕು ಕಂದನ ಕರೆಗೋಡೋಡಿ ಬಂದೆತ್ತಿಕೊಳ್ಳುವ ಮಾತೆಯಂತೆ ಓಡೋಡಿ ಬಂದು ನಮ್ಮನ್ನು ಉದ್ಧಾರಮಾಡುತ್ತಾನೆ ಎಂದು ಸಾರಿ ಸಾರಿರುವ ದಿವ್ಯ ಮಂಗಳ ಗೀತೆಗಳೇ ಶ್ರೀಗೋದಾದೇವಿ ಅನುಗ್ರಹಿಸಿರುವ "ತಿರುಪ್ಪಾವೈ" ಗೀತಮಾಲೆ. ಈ ಗೀತೆಗಳ ಮಹತ್ವನ್ನು ಅರಿತೇ ಶ್ರೀ ರಾಮಾನುಜರು, ಎಲ್ಲ ವೈಷ್ಣವ ಮನೆ ಮಂದಿರ ಮಠಗಳಲ್ಲೂ ಪ್ರತಿನಿತ್ಯ ಪೂಜಾ ವೇಳೆಯಲ್ಲಿ ತಪ್ಪದೇ ಈ ಗೀತೆಗಳು ಪ್ರತಿಧ್ವನಿಸುವಂತೆ ವ್ಯವಸ್ಥೆ ಮಾಡಿದ್ದಾರೆ. ಈ ಗೀತೆಗಳು ಎಂದಿಗಿಂತರೂ ಇಂದು ಅತ್ಯಂತ ಅವಶ್ಯಕವಾಗಿ ನಮ್ಮ ಸಮಾಜಕ್ಕೆ ಹೆಚ್ಚಿನ ರೀತಿಯಲ್ಲಿ ಬೇಕಾಗಿದೆ. ಪುರಾತನ ದ್ರಾವಿಡ ಭಾಷೆಯಲ್ಲಿನ ಈ ಪುಷ್ಪಗುಚ್ಛವನ್ನು ಪಂಡಿತ ಪಾಮರರಾದಿಯಾಗಿ ಓದಿ ಅರ್ಥಮಾಡಿಕೊಂಡು ಸಂತಸಿಸುವಂತೆ ನಮ್ಮ ಶ್ರೀವೈಷ್ಣವಕುಲ ಸಂಜಾತರಾದ ದಾಸಗೋಪಾಲ (ಅರ್ಚಕ ವೇಣುಗೋಪಾಲದಾಸರು), ಸರಳ ಸುಂದರ ಕನ್ನಡದಲ್ಲಿ ಭಾವಾನುವಾದ ಮಾಡಿ ತಮಿಳು ಮೂಲ ಮತ್ತು ಕನ್ನಡ ಭಾವಾನುವಾದ ಎರಡನ್ನೂ ನಮ್ಮ ಕೈಗೆ ಇಟ್ಟಿದ್ದಾರೆ. ಜೊತೆಗೆ ಈ ಕೃತಿಯಲ್ಲಿ ತಾವೇ ರಚಿಸಿ ಹಾಡಿ ಆನಂದಿಸಿದ ಗೀತೆಗಳ ಮಾಲೆಯಿಂದ ಅಂಕರಿಸಿದ್ದಾರೆ. ಕೊನೆಯಲ್ಲಿ ಶ್ರೀ ಮಹಾಲಕ್ಷ್ಮೀ ಸುಪ್ರಭಾತಂ ಮತ್ತು ಶ್ರೀ ಯದುಶೈಲನಾಥ ಸ್ತೋತ್ರಗಳನ್ನೂ ಸೇರಿಸಿದ್ದಾರೆ. ಇದರಿಂದ, ದಿನನಿತ್ಯದ ಕೆಲಸಗಳಲ್ಲಿ ಬಿಡುವಿಲ್ಲದವರೂ ಸಹ ಪ್ರಾತಃಕಾಲ ಸ್ವಲ್ಪ ಸಮಯದಲ್ಲಿಯೇ ಈ ಕೀರ್ತನೆಗಳ ಅನುಸಂಧಾನದಿಂದ, ಶ್ರೀ ಮಹಾಲಕ್ಷ್ಮೀ ಸಮೇತ ಶ್ರೀಮನ್ನಾರಾಯಣನ ಕೃಪೆಗೆ ಪಾತ್ರರಾಗುವುದರಲ್ಲಿ ಸಂಶಯವಿಲ್ಲ.

ಇನ್ನು,

*ವಿಶ್ವಾನಿ ದೇವ ಸವಿತುರ್ದಿರಿತಾನಿ ಪರಾಸುವ ಯದ್‌ಭದ್ರಂ ತನ್ನ ಆಸಮ ( ಯ, 30-3 )*
*ಯೋ ಭೂತಂ ಚ ಭವ್ಯಂ ಚ ಸರ್ವಂ ಯಶ್ಚಾತಿಷ್ಠತಿ।*
*ಸ್ವರ್ಯಸ್ಯ ಚ ಕೇವಲಂ ತಸ್ಮೈ ಜ್ಯೇಷ್ಠಾಯ ಬ್ರಹಣೇ ನಮಃ (ಅ. 10-8-1)*
*ಯ ಆತ್ಮದಾ ಬಲದಾಯಸ್ಯ ವಿಶ್ವ ಉಪಾಸತೇ ಪ್ರವಿಷಂ ಯಸ್ಯದೇವಾ :*
*ಯಸ್ಯ ಛಾಯಮೃತಂ ಯಸ್ಯ ಮೃತ್ಯು। ಕಸ್ಮೈ ದೇವಾಯ ಹವಿಷಾ ವಿಧೇಮ (ಯ. 25-13)*

( ಹೇ ಸಮಸ್ತ ಜಗತ್ತನ್ನೂ ಸೃಷ್ಟಿಸಿದ, ದೇವ ಸಮಸ್ತ ದುಃಖಗಳನ್ನೂ ನಮ್ಮಿಂದ ದೂರಮಾಡು ಮತ್ತು ಯಾವುದು ಕಲ್ಯಾಣವೋ ಅದನ್ನು ನಮಗೆ ಎಲ್ಲೆಡೆಯಿಂದಲೂ ಕರುಣಿಸು.

ಯಾವನು ಭೂತ, ವರ್ತಮಾನ ಮತ್ತು ಭವಿಷ್ಯತ್ ಎಲ್ಲವುಗಳ ಮೇಲೆ ಸ್ವಾಮಿಯಾಗಿದ್ದಾನೋ ಹಾಗೂ ಯಾಃ ಸದು ಕೇವಲ ಸುಖ ಸ್ವರೂಪವೇ ಆಗಿದೆಯೋ ಆ ಉತ್ಕೃಷ್ಟನಾದ ಪರಮಾತ್ಮನಿಗೆ ನಮಸ್ಕಾರ.

ಯಾವನು ಆತ್ಮಜ್ಞಾನವನ್ನು ಕೊಡುವವನೋ, ಬಲವನ್ನು ಕೊಡುವವನೋ ಆಗಿದ್ದಾನೆಯೋ ಯಾವನನ್ನು ಎಲ್ಲ ವಿದ್ವಾಂಸರೂ, ಉಪಾಸಿಸುವರೋ ಹಾಗೂ ಯಾವನ ಶಾಸನವನ್ನು ಅಂಗೀಕರಿಸುತ್ತಾರೋ ಯಾವನ ಆಶ್ರಯವು ಅಮೃತವಾಗಿದೆಯೋ ಮತ್ತು ಯಾವನ ಅನಾಶ್ರಯವು ಮೃತ್ಯುವಿನಂತಾಗಿರುವುದೋ ಆ ಸುಖಸ್ವರೂಪನಾದ ದೇವನಿಗಾಗಿ ನಾವೆಲ್ಲರೂ ಭಕ್ತಿ ಇಡೋಣ )

ಎಂಬ ವೇದ ವಾಕ್ಕಿನಂತೆ ಸೃಷ್ಟಿಕರ್ತನಾದ ಶ್ರೀಮನ್ನಾರಾಯಣನನ್ನು ಧ್ಯಾನಿಸೋಣ.

*ಇರಲಿ ನಿನ್ನೊಲವಿನಾಸರೆ ನಮಗೆ ನೀನನಾಥ ಬಂಧು ಧರಣೀಧರನೆ ಗೋವಿಂದಾ*

*ಸ್ವೀಕರಿಸು ಪಾಲ್ಬೆಣ್ಣೆ ಮೇಣ್ ಮೊಸರು ಹಾಲೋಗರವ ಪ್ರೇಮದಲಿ* (*ಪಾಶುರ - 27*)
*ಹಂಚಿ ಮೆಲ್ಲುವ ಬಾ ತಂದ ಬುತ್ತಿಯನೆಲ್ಲ ಕೊಳಲಗಾನವ ತುಂಬಿ ಹೃನ್ಮನದಿ*
*ಇರಲೆಮಗೆ ನಿನ್ನ ಮಮತೆಯ ಅನುಬಂಧ ಭೂತನಾಥೇಶ್ವರ ನಮಿತ ಸುಚರಿತ* (*ಪಾಶುರ - 28*)

*ಎಲ್ಲ ಜನುಮಗಳಲಿರಲೆಮಗೆ ನಿನ್ನ ಸೇವೆಯ ಭಾಗ್ಯ ನಿನ್ನೊಡನಾಟ ತಪ್ಪದಿದು*
*ನೀನನಾಥ ಬಂಧು ಎಂಬಬಿಧಾನವನು ಮೆರೆಯಬೇಕಯ್ಯ ಸಪ್ತಾದ್ರಿವಾಸ* (*ಪಾಶುರ - 29*)

ಎಂದು ಭಕ್ತಿಶ್ರದ್ಧೆಗಳಿಂದ ಪೂಜಿಸಿ ಅವನನ್ನೊಲಿಸಿಕೊಂಡು ಜನ್ಮ ಸಾರ್ಥಕ್ಯ ಪಡಿಸಿಕೊಳ್ಳೋಣ ಈ ನಿಟ್ಟಿನಲ್ಲಿ "ತಿರುಪ್ಪಾವೈ ಗೀತಮಾಲೆ" ಎಲ್ಲರಿಗೂ ಒಂದು ದಾರಿದೀಪ.

ಇಲ್ಲಿ ನಾವು ಕಾಣುವ ಒಂದು ವೈಶಿಷ್ಟ್ಯತೆಯೆಂದರೆ, ಲೇಖಕರು ತಮ್ಮ ಮಾತಾಪಿತೃಗಳಂತೆ ಭಾಗವತರ ಸೇವೆ, ಸಮಾಜಸೇವೆಯಲ್ಲಿ ನಿರತರಾಗಿ, ಆಧ್ಯಾತ್ಮಿಕ ಸಾಧನೆಯತ್ತ ಸತತವಾಗಿ ನಡೆಯಲು ನೆರಳಿನಂತೆ ನಡೆದುಬಂದು ಹೃತ್ಪೂರ್ವಕವಾಗಿ ನೆರವಾಗಿರುವ ತಮ್ಮ ಧರ್ಮಪತ್ನಿಗೆ ಈ ಕೃತಿಯನ್ನು ಅರ್ಪಿಸಿದ್ದಾರೆ. ಇವರ ಆದರ್ಶ ದಾಂಪತ್ಯ ಜೀವನ ನಮ್ಮ ಸಮಾಜಕ್ಕೆ ಮಾದರಿಯಾಗಿ ಮಠ ಮಂದಿರಗಳಿಗೆ ಇಂತಹವರ ಸೇವೆ ಹೆಚ್ಚು ಹೆಚ್ಚಿನ ರೀತಿಯಲ್ಲಿ ಲಭ್ಯವಾಗುವಂತಾಗಲೀ ಎಂದು ಆಶಿಸುತ್ತೇವೆ ಮತ್ತು ಶ್ರೀಮನ್ನಾರಾಯಣನು ಲೇಖಕರು ಹಾಗೂ ಅವರ ಕುಟುಂಬ ವರ್ಗಕ್ಕೆ ಹಾಗೂ ಬಂಧುವರ್ಗಕ್ಕೂ ಆಯುರಾರೋಗ್ಯಾದಿ ಸಕಲ ಸನ್ಮಂಗಳಗಳನ್ನಿತ್ತು ಇವರಿಂದ ಶ್ರೀ ರಾಮಾನುಜರ ಭಕ್ತಿ ಸಾಹಿತ್ಯ ಹೆಚ್ಚಿನ ರೀತಿಯಲ್ಲಿ ಭಕ್ತರ ಹೃನ್ಮನಗಳನ್ನು ಬೆಳಗಿಸುವಂತಹ ಕೃತಿಗಳು ರಚಿಸಲು ಶಕ್ತಿ ಸಾಮರ್ಥ್ಯಗಳನ್ನು ನೀಡಲಿ ಎಂದು ಮಂಗಲಾ ಶಾಸನ ಮಾಡುತ್ತೇವೆ.

*ವಾಂಚಾ ಕಲ್ಪತರುಭ್ಯಶ್ಚ ಕೃಪಾಸಿಂಧುಭ್ಯ ಏವಚ । ಪತಿತಾನಂ ಪಾವನೇಭ್ಯೋ ವೈಷ್ಣವೇಭ್ಯೋ ನಮೋ ನಮಃ ॥*

(ಶ್ರೀಕೃಷ್ಣನ ಎಲ್ಲ ವೈಷ್ಣವ ಭಕ್ತರಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು. ಇವರು ಕಲ್ಪವೃಕ್ಷದಂತೆ ಎಲ್ಲರ ಇಚ್ಛೆಗಳನ್ನೂ ನಡೆಸಿಕೊಡಬಲ್ಲರು ಮತ್ತು ಪತಿತರ ವಿಷಯದಲ್ಲಿಯೂ ಅವರು ಬಹು ಕೃಪಾಳುಗಳೂ ಆಗಿರುವುದರಿಂದ ಅವರಿಗೆ ನನ್ನ ಪ್ರಣಾಮಗಳು)

ಎಂದು ಹಾರೈಸುತ್ತಾ, ಈ ಪುಸ್ತಕವನ್ನು ಎಲ್ಲ ವೈಷ್ಣವರೂ, ಭಕ್ತ ಬಂಧುಗಳೂ ತಪ್ಪದೇ ಕೊಂಡುಕೊಂಡು ನಿತ್ಯ ಪಾರಾಯಣ ಮಾಡಿ ಲೇಖಕರ ಉದ್ದೇಶ, ಶ್ರಮ ಸಾರ್ಥಕವಾಗುವಂತೆ ಆಗಲೀ ಎಂದು ನಾವು ಮಂಗಲಾಶಾಸನ ಮಾಡುತ್ತೇವೆ.

ಶ್ರೀಮತೇ ರಾಮಾನುಜಾಯ ನಮಃ

ಇತಿ ನಾರಾಯಣ ಸ್ಮೃತಿ

श्री निवेश राजाय

12/3/2000

**: ಕೊಡುಗೆ :**

**ಉ॥ ವೇ॥ ಬಿ.ಎನ್. ವೆಂಕಟಾಚಲಪತಿ ಸೌ॥ ಜಯಲಕ್ಷ್ಮೀ**

ಸಂಸ್ಥಾಪಕ ಅಧ್ಯಕ್ಷರು
ವೈಷ್ಣವೀ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ,
ಆರ್. ಬಿ. ಐ. ಕಾಲೋನಿ, ಬೆಂಗಳೂರು.
ಮತ್ತು
ಕಾರ್ಯಾಧ್ಯಕ್ಷರು ಶ್ರೀ ಯತಿರಾಜ ರಾಮಾನುಜ ಮಹಾ ಸಂಸ್ಥಾನಂ ಮಠ.

## ಹಾಡು ಮನವೇ

ಹೃದಯ ತುಂಬಿ ಹಾಡು ಮನವೇ ಪ್ರಹ್ಲಾದ ವರದನ
ಉಜ್ಜೈನಿ ಚೆಲುಮಸಂದ್ರ ಮಹಾಬಲಾದ್ರಿ ನಿಲಯನಾ

ಕಂಬದಲಿ ಬಿಂಬಿಸುತ ಕರುಳ ಮಾಲೆಯ ಧರಿಸಿದವನ
ಭಕ್ತಭಾಂಧವನೆಂಬ ಬಿರುದಾಂಕಿತ ಶ್ರೀ ಸತ್ಯಸುಂದರನ

ಸನಕಸನಂದರ ಮಾನಸ ರಾಜಹಂಸ ರಮಾರಮಣನ
ಮಧುಕೈಟಭಾಸುರ ಮರ್ಧನ ಶ್ರೀ ಹಯವದನ ಶ್ರೀ ಹರಿಯ
ನಾರದಾದಿ ಸುರವಂದ್ಯ ವೇದನಾದಾಂತರಂಗ ಶ್ರೀರಂಗರಂಗನ
ಮಾಮನೋಹರ ನಮ್ಮ ಕ್ಷೀರವಾರಿಧಿ ಶಯನ ನಳಿನನಾಭನನ್ನ

ಕಂದನನು ಸಲಹೆ ಮೋದದಿಂದ್ಬೆದ ಮುದ್ದು ನರಸಿಂಹನ
ಕೇಶಿವ್ಯೋಮಾಸುರ ಸಂಹಾರಿ ವೇಣು ಮಾಧವನ
ರಾಜಸೂಯವ ಕಾಯ್ದ ಗೋಪಾಲ ಗೀತಗೋವಿಂದ
ದೃಪದ ಕುವರಿಯ ಪೊರೆದ ಮಧುರಾಧಿಪ ಶ್ರೀಕೃಷ್ಣನ್ನ

ವಸುದೇವ ದೇವಕೀ ತನಯ ನಂದಯಶೋದಾಕಂದ
ಮುಚುಕುಂದ ವರದ ಶ್ರೀ ವೈಷ್ಣವಾಗಮಾನುತ ಚರಿತ
ದಾಸಗೋಪಾಲನಾ ಕಾಲದೈವ ಕಂಬದಾ ನರಸಿಂಹ
ಪಕ್ಷಿವಾಹನ ಶ್ರೀ ಯಾದವಾದ್ರೀಶ ಯತಿರಾಜ ವರದನಾ

13-3-2000

## ಎಂಥ ಮಹಿಮನೋ

ಎಂಥ ಮಹಿಮನೋ ನೀನೆಂಥ ಕರುಣಾಂತರಂಗನೋ
ತೊಂಡನೂರು ಪುರವರದ ನಂಬಿ ನಾರಾಯಣ

ಯತಿರಾಜ ತಾನಾಗಿ ಆದಿಶೇಷನು ಬಂದನೆಂದೊಲುಮೆಯಲಿ
ಧರೆಗಿಳಿದು ಬಂದವನೆ ಕ್ಷೀರಾಬ್ಧಿತನಯ ರಮಣ

ವಸುದೇವ ದೇವಕೀ ತನಯ ನಂದಗೋಕುಲಾನಂದ
ಪೂತನೀ ಕಾಳಿಂಗಶಕಟ ಕೇಶಿವ್ಯೋಮಾಸುರ ಸಂಹಾರ
ಬಾಲಲೀಲಾ ವಿಹಾರ ಗೋವಿಂದ ಗೋಪಿಕಾರಮಣ
ಅಂಡಜಾ ವಾಹನ ಅರವಿಂದನಯನ ನಯನಾಭಿರಾಮ

ವೇದಗಳ ತಂದವನೆ ಹಯವದನ ಶ್ರೀಹರಿಯೆ
ಭುವಿಯ ಸಲಹಿದೆ ವರಾಹ ನೀನಾಗಿ ಭಾರತೀರಮಣ
ಕಂಸಚಾಣೂರ ಶಿಶುಪಾಲ ವಕ್ರದಂತಾಸುರ ಸಂಹಾರ
ನಂಬಿದಾ ಧರ್ಮನಂದನನ ಪೊರೆದ ನಂಬಿನಾರಾಯಣನೆ

ಧರ್ಮದುಂದುಭಿ ಮೊಳಗೆ ಭುವಿಗಿಳಿದು ಬಂದವನೆ ನಾರಾಯಣನೇ
ರುಕ್ಮಿಣೀ ಸತ್ಯಭಾಮಾ ರಮಣ ನಿತ್ಯೋತ್ಸವಾನಂದ ವೇಣುಗೋಪಾಲ
ಪೊಗಳಲಳವೇ ನಿನ್ನ ಮಹಿಮಾತಿಶಯಗಳನು ನಂಬಿನಾರಾಯಣ
ದಾಸಗೋಪಾಲನಾ ಕುಲದೈವ ಚೆಲುವ ನರಹರಿಯೇ ವೇದಾದ್ರಿವಾಸ
14-3-2000

14-3-2000

॥ ಓಂ ಶ್ರೀ ಯೈ ನಮಃ ॥







॥ ಶ್ರೀಮತೇ ರಾಮಾನುಜಾಯ ನಮಃ ॥

ಶ್ರೀಯದುಗಿರಿ ಯತಿರಾಜ ಮಠ

**( SREE YADUGIRI ETHIRAJA MATAM )**

(THRINARAYANA PURAM, MELUKOTE - 571 431. MANDYA DIST.)

ದಿನಾಂಕ ೧೬.೦೧.೧೯೯೯

ಕ್ಯಾಂಪ್ : ಕಲ್ಯಾಣಪುರಿ ( ಮಲ್ಲೇಶ್ವರಂ )

## ಮಂಗಲಾಶಾಸನ

ಅನಾದಿ ಕರ್ಮವಾಸನೆಯಿಂದ ಅಚಿತ್ಕಲ್ಪರಾಗಿ ಬಿದ್ದಿದ್ದ ಈ ಚೇತನರು ನಿತ್ಯ ಸೂರಿಗಳಂತೆ ಜ್ಞಾನವಂತರಾಗಿ ಸುಖವಾಗಿ ಬಾಳಲಿ ಎಂಬುದಾಗಿ ಪರಮಕಾರುಣಿಕನಾದ ಭಗವಂತನು ನಮಗೆ ಕರಣಕಳೇಬರಗಳನ್ನು ಕೊಟ್ಟು ವೇದವೆಂಬ ಜ್ಞಾನವನ್ನು ಉಪದೇಶಿಸಿದನು. ಆದರೆ ವೇದವು ಅತಿ ಗಹನವಾದುದರಿಂದ ಅದು ಪ್ರಯೋಜನವಿಲ್ಲವಾಯಿತು. ಪುನಃ ಭಗವಂತನು ನನ್ನ ನಡವಳಿಕೆಯಿಂದ ತಿಳಿಯಲಿ ಎಂದು ರಾಮಕೃಷ್ಣಾದ್ಯಾವತಾರಗಳನ್ನೆತ್ತಿ ತೋರಿಸಿದನು. ಆದರೆ ಅದು ಆಯಾ ಕಾಲಕ್ಕೆ ಸರಿಹೋಯಿತೇ ಹೊರತು ಎಲ್ಲರಿಗೂ ಎಲ್ಲಾ ಕಾಲದಲ್ಲಿ ಸರಿಹೋಗದ್ದರಿಂದ ಎಲ್ಲಾ ಕಾಲದಲ್ಲೂ ಎಲ್ಲರಿಗೂ ಆದರ ಅನಾದರ ಎಂಬಂತೆ ಅರ್ಚಾವತಾರವನ್ನೆತ್ತಿದನು. ಜೊತೆಯಲ್ಲಿಯೇ ಮನುಷ್ಯ ಸಜಾತೀಯರಾಗಿ ಎಂದರೆ ಆಳ್ವಾರಾಚಾರ್ಯರೆಂಬುದಾಗಿ ಅವತರಿಸಿದನು.

ಈ ಆಳ್ವಾರಾಚಾರ್ಯರುಗಳಲ್ಲಿ ಒಬ್ಬರಾದ ವಿಷ್ಣುಚಿತ್ತರ್ ಪೆರಿಯಾಳ್ವಾರ್ ಎಂಬ ಹೆಸರಿನಲ್ಲಿ ಅವತರಿಸಿದನು. ಅವರ ಸಾಕುಮಗಳಾದ ಆಣ್ಡಾಳ್ ಗೋದಾದೇವಿಯು ಚಿಕ್ಕ ವಯಸ್ಸಿನಿಂದಲೇ ಭಗವಂತನಲ್ಲಿ ಭಕ್ತಿಯುಳ್ಳವಳಾಗಿ ಬೆಳೆದಳು. ವಿಷ್ಣುಚಿತ್ತರು ಗೋದಾದೇವಿಗೆ ಚಿಕ್ಕಂದಿನಿಂದಲೇ ಭಗವಂತನ ವಿಷಯವಾಗಿ ಉಪದೇಶಿಸಿ ಬರಲು ಗೋದಾದೇವಿಯು ಶರೀರವು ಬೆಳೆದಂತೆ ಜ್ಞಾನವೂ ಬೆಳೆದು ಶ್ರೀ ಕೃಷ್ಣನಲ್ಲಿ ಅಪರಿಮಿತ ಭಕ್ತಿಯುಳ್ಳವಳಾದಳು. ಶ್ರೀ ಕೃಷ್ಣನಲ್ಲಿ ಭಕ್ತಿಯಿಂದ ಮೋಹಿತಳಾಗಿ ಅವನನ್ನೇ ವಿವಾಹವಾಗಬೇಕೆಂದು ಕಾತ್ಯಾಯಿನೀ ಅಥವಾ ಧನುರ್ಮಾಸ ವ್ರತವನ್ನಾಚರಿಸಿ ಬಂದಳು.

ಆ ವ್ರತವನ್ನಾಚಸುವ ಕ್ರಮವನ್ನು ತಿರುಪ್ಪಾವೈ ಎಂಬ ಮೂವತ್ತು ಪಾಶುರ (ಪದ್ಯಗಳು) ಗಳಲ್ಲಿ ಬರೆದಳು. ಆ ತಿರುಪ್ಪಾವೈ ಎಂಬ ಮೂವತ್ತು ಪದ್ಯಗಳು ವೇದಸಾರವಾದುದು. ಆದ್ದರಿಂದಲೇ ಶ್ರೀ ವೈಷ್ಣವರು ತಮ್ಮ ನಿತ್ಯ ಜೀವನ ಕ್ರಮದಲ್ಲಿ ದೇವಸ್ಥಾನಗಳಲ್ಲಿಯೂ ಮನೆಗಳಲ್ಲಿಯೂ ಪಾರಾಯಣ ಮಾಡಿ ಬರುವವರಾದರು.

ನಾಲ್ಕು ಸಾವಿರ ದಿವ್ಯ ಪ್ರಬಂಧಗಳಲ್ಲಿ ರಚಿಸಿದ ಆಳ್ವಾರರುಗಳೆಲ್ಲರೂ ಪುನರ್ಜನ್ಮ ಬೇಡವೆಂದು ಹೇಳುವರು. ಆಣ್ಡಾಳ್ - ಗೋದಾದೇವಿಯಾದರೋ ಇಹ ಲೋಕದಲ್ಲಿ ಪರಲೋಕದಲ್ಲೂ ಪರಮಾತ್ಮನ ಸಂಬಂಧವಿರಬೇಕೆಂದು ಜನ್ಮಜನ್ಮಾಂತರಗಳನ್ನೆತ್ತಿದರೂ ಭಗವಂತನ ಸಂಬಂಧವಿರಬೇಕು ಎಂದು ಹೇಳುವರು.

*ದೇವತ್ವೇ ದೇಹೇಯಂ ಮಾನುಷತ್ವೇ ಚ ಮಾನುಷೀ*

*ವಿಷ್ಣೋರ್ದೇಹಾಯ ರೂಪಾಯ್ಯೆ ಕರೋತ್ಯೈಷೋ ಆತ್ಮಸ್ತಜಂ*

*ರಾಘವತ್ವೇ ಭವೇತ್ ಸೀತಾರುಕ್ಮಿಣಿ ಕೃಷ್ಣಜನ್ಮನೀ*

*ಅನ್ಯೇಷು ಚ ವತಾರೇಷು ವಿಷ್ಣೋಶೇಷಾನಪಾಯಿನೀ ॥*

ಈ ರೀತಿಯಲ್ಲಿ ಭಗವಂತನೂ ಮಹಾಲಕ್ಷ್ಮಿಯೂ ಸಹ ಇಹಲೋಕದಲ್ಲಿ ಆಗಿಂದಾಗ್ಗೆ ಅವತರಿಸುತ್ತಾ ಒಬ್ಬರನ್ನೊಬ್ಬರು ಬಿಡದೆ ಇರುವಂತೆ ನಾವೂ ಸಹ ಜನ್ಮಜನ್ಮಗಳನ್ನೆತ್ತಿದರೂ ಭಗವಂತನನ್ನು ಬಿಡದೇ ನಾವು ಭಗವಂತನಿಗೇ ಸೇರಿದವರು ಅವನ ಸಂಬಂಧ ಬಿಡಬಾರದು, ಬಿಡುವುದಿಲ್ಲ ಅವನು ಶೇಷಿ ನಾವು ಶೇಷ ಎಂದು ತಿಳಿಯಬೇಕು, ಈ ರೀತಿ ಹೇಳಬೇಕು.

ಈ ವೇದಾಂತಾರ್ಥವನ್ನು ನಾಲ್ಕು ಸಹಸ್ರ ದ್ರಾವಿಡ ಪದ್ಯಗಳಲ್ಲಿ ಶ್ರೇಷ್ಠವಾದ ಈ ಗೋದಾದೇವಿಯ ಮೂವತ್ತು ಪಾಶುರಗಳಲ್ಲಿ ಹೇಳುವುದರಿಂದ ಮಹಾ ವಿದ್ವಾನ್ ಕೂರತ್ತಾಳ್ವಾರ್‌ರವರು ಮಹಾ ಮಂಗಳಾರತಿ ಕ್ರಮವನ್ನು ಏರ್ಪಡಿಸಿ ಆ ಸಮಯದಲ್ಲಿ ಉಪನಿಷತ್ತಿನೊಂದಿಗೆ ಅದೇ ಅರ್ಥವನ್ನು ಕೊಡುವ ಗೋದಾದೇವಿ ಪಾಶುರವನ್ನು ಹೇಳಬೇಕೆಂದು ಶ್ರೀರಾಮಾನುಜರಿಗೆ ತಿಳಿಸಲು, ಶ್ರೀರಾಮಾನುಜರ ಆದೇಶದಂತೆ ಶ್ರೀವೈಷ್ಣವರೆಲ್ಲರೂ ಪ್ರತಿದಿನವೂ ಅನುಸಂಧಿಸಿ ಬರುವರು. ಅನುಸಂಧಿಸಿ ಬರುತ್ತೇವೆ.

ಬೆಂಗಳೂರು ಶ್ಯಾಮಾ ಪಂಡಿತರ ಮಗ ವೇಣುಗೋಪಾಲಾಚಾರ್ಯ ಅವರು ಆಣ್ಡಾಳ್ ಗೋದಾದೇವಿ ರಚಿಸಿದ ವೇದಾಂತ ಸಾರವಾದ ತಿರುಪ್ಪಾವೈ ಮೂವತ್ತು ಪಾಶುರಗಳನ್ನು ಬರೆದಿರುತ್ತಾರೆ. (ಪಾಶುರ - ಪದ್ಯಗಳು) ಅದಕ್ಕೆ ಲಲಿತವಾದ ಕನ್ನಡದಲ್ಲಿ ಸಾಂಪ್ರದಾಯಿಕ ಅರ್ಥ ತಪ್ಪದೇ ಕನ್ನಡದಲ್ಲಿ ಪದ್ಯವನ್ನು ಬರೆದಿರುವರು. ಅಲ್ಲದೇ ಪಾಶುರ ಪದ್ಯಗಳಿಗೆ ಸಾರವತ್ತಾಗಿ ವೇದಾಂತಾರ್ಥ ಕೊಡುವ ಟಿಪ್ಪಣಿ ಅರ್ಥವನ್ನು ಲಲಿತವಾಗಿ ಬರೆದಿರುವರು. ಭಾವಾರ್ಥವು ಚೆನ್ನಾಗಿರುತ್ತದೆ. ಅಲ್ಲದೇ ಆಣ್ಡಾಳ್ ಭಗವಂತನ ವಿಶೇಷದಿಂದ ಹೇಗೆ ಮನೋಬಾವ ಉಂಟಾದ್ದನ್ನೂ ವಾರಣಮಾಯಿರಂ ಎಂಬ ವಿಷಯವನ್ನೂ ಬರೆದಿರುವರು. ಅದನ್ನೂ ಸಹ ಕನ್ನಡದಲ್ಲಿ ಪದ್ಯ ರೂಪದಿಂದ ಅರ್ಥ ಕೆಡದಂತೆ ಬರೆದಿರುವುದು ಶ್ಲಾಘನೀಯವಾಗಿರುತ್ತದೆ. ವಿವಾಹ ಕಾಲದಲ್ಲಿ ವಧುವು ಈ ವಾರಣಮಾಯಿರಂ ಪದ್ಯ ಅಥವಾ ಹಾಡನ್ನು ಹಾಡಿದರೆ ರಸಿಕನಾದ ವರನು ಹೇಗೆ ಸಂತೋಷಪಡುವನು ಎಂದು ಯೋಚಿಸಿದಲ್ಲಿ ವಧೂವರರ ಸಂತೋಷವು ಇಮ್ಮಡಿಸುತ್ತದೆ.

ಸಹೃದಯರು ಮತ್ತು ಶ್ರೀ ವೈಷ್ಣವ ಸಾಂಪ್ರದಾಯಿಕರು ಎಲ್ಲರೂ ಈ ಗ್ರಂಥವನ್ನು ಓದಿ ಮನನ ಮಾಡುವುದರಿಂದ ಅವರು ಇಹಲೋಕ ಪರಲೋಕ ಎರಡನ್ನೂ ಸಾಧಿಸುವ ಶಕ್ತಿ ಬರುವುದು. ಶಾರೀರಕ, ಮಾನಸಿಕ ಶಾಂತತೆಯುಂಟಾಗುವುದು. ಅವರವರು ಸಕಲ ಇಷ್ಟಾರ್ಥವನ್ನು ಹೊಂದುವರು. ಪುಸ್ತಕವನ್ನು ತೆಗೆದುಕೊಂಡು ದೇವರ ಮುಂದಿಟ್ಟು ಆರತಿ, ದೀಪ ಊದಬತ್ತಿ ಹಚ್ಚಿ ತೋರಿಸಿದರೂ ಭಗವಂತನು ಸಕಲ ಸನ್ಮಂಗಳವನ್ನೂ ಕೊಡುತ್ತಾನೆ. ಎಂದು ತಿಳಿಸಿ ಮಂಗಲಾಶಾಸನ ಮಾಡುತ್ತೇವೆ.

ಶ್ರೀಮಾನ್ ವೇಣುಗೋಪಾಲಾಚಾರ್ಯ (ತಿರುನಾರಾಯಣ) ಈ ರೀತಿ ಲೋಕ ಕ್ಷೇಮವಾಗಿ ಇನ್ನೂ ಅನೇಕ ವೇದಾಂತ ಮತ್ತು ಸಾಂಪ್ರದಾಯಿಕ ಗ್ರಂಥಗಳನ್ನು ಬರೆದು ಬೆಳಕಿಗೆ ತರಲು ಅವರಿಗೆ ಭಗಂವತನು ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಅನುಗ್ರಹಿಸಲಿ ಎಂದು ಮಂಗಲಾಶಾಸನ ಮಾಡುತ್ತೇವೆ.

*ಶ್ರೀ ರಾಮಾನುಜ*







**ಅಷ್ಟಾಂಗ ಯೋಗ ವಿಜ್ಞಾನ ಮಂದಿರ,**

೬೨೫, ೪ನೇ ಕ್ರಾಸ್, ಹನುಮಂತನಗರ, ಬೆಂಗಳೂರು - ೧೯.

॥ ಶ್ರೀಮತೇ ರಾಮಾನುಜಾಯ ನಮಃ ॥

ಶ್ರೀ ರಂಗ ಸದ್ಗುರವೇ ನಮಃ

ಇದು ಒಂದು ಪವಿತ್ರವೂ ಸಂದರವೂ ಮಂಗಲಕರವೂ ಆಗಿರುವ ಕಿರುಹೊತ್ತಿಗೆ. ಏಕೆಂದರೆ ಇದರ ಇಡೀ ವಸ್ತುವು "ಪವಿತ್ರಾಣಾಂ ಪವಿತ್ರಂ ಯೋ ಮಂಗಲಾನಾಂ ಚ ಮಂಗಲಂ" ಎಂದು ಸತ್ಯವಚನರಾದ ಸತ್ಯವತೀ ಪುತ್ರರು ಸಾರಿ ಹೇಳಿರುವ ಶ್ರೀ ಭಗವಂತನು. ಇದನ್ನು ರಚಿಸಿದವರು ಭಗವದ್ಭಾಗವತ ನಿಷ್ಠರಾದ ಅರ್ಚಕ ಶ್ರೀ ವೇಣುಗೋಪಾಲದಾಸರು, ಸರಳವಾದ ತಿಳಿಗನ್ನಡದಲ್ಲಿ ಗ್ರಂಥವನ್ನು ರಚಿತವಾಗಿದೆ.

ಬೇರೆಬೇರೆ ಶ್ರೀ ಕ್ಷೇತ್ರಗಳಲ್ಲಿ ಬಿಜಯಮಾಡಿಸಿರುವ ಶ್ರೀಹರಿಯ ಅರ್ಚಾಮೂರ್ತಿಗಳನ್ನು ಮನದಣಿಯ ಅನುಭವಿಸಿ, ಕಾಲಕಾಲಗಳಲ್ಲಿ ಹೊರಹೊಮ್ಮಿದ್ದ ಆ ಅನುಭವ ಪರೀವಾಹ ಪರಂಪರೆಯೇ ಆಗಿರುವ ಭಾವಗೀತೆಗಳ ಮಾಲೆಯಿಂದ ಇದು ಅಲಂಕೃತವಾಗಿದೆ. ಅಂತೆಯೇ ಸುಪ್ರಸಿದ್ಧವಾಗಿರುವ ತಿರುಪ್ಪಾವೈ ನಾಯಕೀ ಗೀತೆಯ ಭಾವಾನುವಾದವೂ ಇದರ ಪ್ರಧಾನ ವಿಷಯವಾಗಿದೆ. ಈ ಗೀತೆಯ ಸುಂದರ ಭಾವಾನುವಾದವನ್ನು ಇನ್ನೂ ಅನೇಕ ಮಹನೀಯರು ಮಾಡಿದ್ದಾರೆ. ಆದರೆ ಇದರ ವಿಶಿಷ್ಟತೆ ಸರಳತೆ ಸಹಜತೆ ಮತ್ತು ಮುಗ್ಧಭಕ್ತಿಯಿಂದ ಮೂಡಿ ಬಂದಿರುವ ಸೌಂದರ್ಯ. ಭಾಷಾದಿ ದೋಷಗಳನ್ನು ಇಲ್ಲಿ ಹೆಚ್ಚಾಗಿ ಪರಿಗಣಿಸಬಾರದು.

ಗ್ರಂಥ ಕರ್ತರು ಗುರುದೇವತಾ ಭಕ್ತರು ತ್ಯಾಗ ವೈರಾಗ್ಯಯುಕ್ತರಾಗಿ ಆತ್ಮಗುಣ ಸಂಪನ್ನರಾಗಿ ನಾರಾಯಣನನ್ನು ತ್ರಿಕರಣಗಳಿಂದಲೂ ಆರಾಧಿಸುತ್ತಿರುವ ಸಜ್ಜನರು. ಇವರ ಈ ಗ್ರಂಥವು ಭಾಗವತರ ಹೃದಯಭೂಷಣವಾಗಲೆಂದು ಅಶಿಸುತ್ತೇವೆ.

ಬೆಂಗಳೂರು
5.8.98

ಇತಿ ನಾರಾಯಣ ಸ್ಮರಣಗಳು
**ಶ್ರೀ ಶ್ರೀರಂಗಪ್ರಿಯ ಶ್ರೀಪಾದ ಶ್ರೀ ಶ್ರೀ**
ಶ್ರೀಮತೇ ರಾಮಾನುಜಾಯ ನಮಃ



ನೀನೆನ್ನ ಕಣ್ಣಮುಂದಾಡುತಿರೋ

ನೀನೆನ್ನ ಕಣ್ಣಮುಂದಾಡುತಿರೋ ರಂಗಯ್ಯ
ಶ್ರೀರಂಗಪ್ರಿಯ ವರದ ಹೇಮಪುರಿ ನಿಲಯ || ಪ ||

ಧರ್ಮನಂದನನಾ ಕುಲದೈವ ನಂದನಂದನ
ಕಂಸ ಚಾಣೂರ ಮರ್ದನನೆ ಶ್ರೀ ವೇಣುಗೋಪಾಲ || ಅ.ಪ ||

ಕೇರಿಕೇರಿಯಲಾಡಿದರೇ ಬೆಣ್ಣೆಕದ್ದನೆನ್ನುವರೋ
ಬಾಲೆಯರು ಬೆಂಬಿಡದೆ ನಿನ್ನ ಮುತ್ತುವರೋ ರಂಗ
ಆಳ್ವಾರರು ಕಂಡೊಡನೆ ನಿನ್ನನೆತ್ತಿಕೊಂಡೊಯ್ಯುವರೋ
ದೃಷ್ಟಿತಾಕಿ ನೀನಳಲು ನಾನೆಂತು ಸಹಿಸಲೋ ಎನ್ನಯ್ಯ || ೧ ||

ರಕ್ಕಸರು ನಿನ್ನ ಕೊಲ್ಲಲೆಳಸುವರೋ ರಂಗಯ್ಯ
ಜಟ್ಟಿಕಾಳಗದಿ ನಿನ್ನ ತುಳಿಯಬಯಸುವರೋ
ಗೋವಳರು ಕುಲದೈವನೀನೆಂದು ಎತ್ತಿಕೊಂಡೋಡುವರೋ
ನಾನಿನ್ನನಗಲಿ ಇರಲಾರೆ ಕ್ಷಣಕಾಲ ಕಂದ ಕೃಷ್ಣಯ್ಯ || ೨ ||

ಹೇಮಪುರಿವಾಸ ಗುಮ್ಮನಿಗೆ ನೀ ಗುಮ್ಮನಾಗಿ
ಭಕ್ತಬಾಂಧವನಾಗಿ ಬೆಳಗುತಾಡುತಿರೆನ್ನ ಬಳಿಯಲ್ಲೇ
ಅಮರಗಂಗಾ ಜನಕ ಪತಿತಪಾವನ ಕೊಳಲಗೋಪಾಲ
ದಾಸಗೋಪಾಲ ವರದ ಯಾದವಾಚಲವಾಸ ಚೆಲುವನಾರಾಯಣನೆ || ೩ ||

ಸಲಹಬೇಕಯ್ಯ

ಸಲಹಬೇಕಯ್ಯ ನೀನೆನ್ನ ಮುದ್ದು ಕೃಷ್ಣಯ್ಯ
ಹೇಮಪುರಿ ನಿಲಯ ಶ್ರೀ ವೇಣುಗೋಪಾಲ || ಪ ||

ಶ್ರೀರಂಗಪ್ರಿಯರಾರಾಧ್ಯಮೂರುತಿಯೇ
ಗೋವರ್ಧನೋದ್ಧಾರಿ ನಂದಯಶೋದಕಂದಾ || ಅ. ಪ ||

ಮುನಿಯ ತಪಗೊಲಿದು ಭುವಿಗಿಳಿದು ನೀ ಬಂದೆ
ಭಕ್ತರಾಭಕ್ತ ಸಂತಾನ ಗೋಪಾಲ ಕೃಷ್ಣಾ
ಗೋವರ್ಧನಾಕ್ಷೇತ್ರ ಸಾಮ್ರಾಟ ನೀ ವಿರಾಟ
ಸಕಲ ಲೋಕ ಜನಕ ವಿಬುಧ ವಂದಿತ ಚರಣ || ೧ ||

ಶ್ರೀ ತುಳಸಿ ವನಮಾಲಿ ಗೋವಿಂದ ಗೋಪಾಲ
ಗೋಕುಲಾನಂದಕಂದ ಮುಚುಕಂದ ವರದ
ಮಾತೆ ಮಮತೆಗೆ ಸಿಲುಕಿದಾ ದಾಮೋದರನೆ
ಪಿಳ್ಳಂಗೋವಿಯ ಚೆಲ್ವಕೃಷ್ಣನೆ ರುಕ್ಮಿಣಿಲೋಲ || ೨ ||

ಭಾಷ್ಯಕಾರರಿಗೊಲಿದ ಶ್ರೀರಂಗರಂಗ ಕಾವೇಟಿರಂಗ
ವಿಷ್ಣುಚಿತ್ತಮುನಿ ಹೃದಯ ವಿಹಾರಿ ಲೀಲಾವಿನೋದ
ಸಿರಿಗೋದೆಯರಸನೇ ದೇವ ದೇವಕೀತನಯನೇ
ದಾಸಗೋಪಾಲವರದ ಚೆಲುವನಾರಾಯಣನೇ || ೩ ||

## ಭಾಗವತರ ನುಡಿ

ವಿದ್ಯಾವಿನಯ ಸಂಪನ್ನರೂ, ಸುಸಂಸ್ಕೃತರೂ ಧರ್ಮನಿಷ್ಠರೂ, ಪರಮಗುರು ದೇವತಾ ಭಕ್ತರೂ ಆದ ಶ್ರೀ ಬಿ.ಎಸ್. ವೇಣುಗೋಪಾಲ್ (ಮೈಸೂರು) ಶ್ರೀ ಆತ್ಮಾರಾಮಕ್ಷೇತ್ರ, ನರಸೀಪುರ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ ಇವರು ಸದ್ಭಕ್ತೆ ಶ್ರೀ ಗೋದಾದೇವಿ ವಿರಚಿತ ದ್ರಾವಿಡ ಪ್ರಬಂಧಗಳಲ್ಲಿ ಮೇರುಕೃತಿಯೆನಿಸಿರುವ ತಿರುಪ್ಪಾವೈ ಎಂಬ ಶ್ರೇಷ್ಠ ಮಾರ್ಗಶಿರವ್ರತಾಚರಣೆ ಗೀತೆಗಳನ್ನು ಸರಳ ಕನ್ನಡ ಭಾಷೆಯಲ್ಲಿ ಅಷ್ಟಪದಿಯಲ್ಲಿ ಸುಂದರ ಭಾವಾನುವಾದ ಮಾಡಿದ್ದಾರೆ. ಇವರು ನಿತ್ಯಾನುಭಾವಿ. ಇವರ ಅಸೀಮ ಭಕ್ತಿಧಾರೆ ಹೃದಯದಲ್ಲಿ ಮಾತ್ರವಲ್ಲ ನಿಸರ್ಗದ ಎಲ್ಲೆಡೆಯಲ್ಲಿಯೂ ಪ್ರವಹಿಸುತ್ತಿದೆ. ಪಾಶುರ (೨) ಅರಿತಾಚರಿಸಿ ನೋಂಪಿಯ ಭಕ್ತಿಯಮುನೆಯೊಳ್ಮಿಂದು ವಿಮಲ ಚರಿತರೆ ವಿಶ್ವವಂದ್ಯರೆ ಭಾರತಿಯ ಮುದ್ದುಕುವರಿಯರೇ ಭಕ್ತಿ ರಸಪಾನದಿಂ ಮುದದಿ ನುತಿಸೋಣ ಭಾವದಾಸೆಗಳ ಬದಿಗಿಟ್ಟು. ಪಾಶುರ ೨೬ : ಇದರಲ್ಲಿ ಅನುವಾದಕರು ತಮ್ಮ ವಿಶಾಲ ಹೃದಯದ ಪರಿಚಯ ಮಾಡಿಕೊಟ್ಟಿದ್ದಾರೆ. ಈ ವ್ರತ ಕೇವಲ ಗೋಕುಲಕ್ಕಾಗಲೀ ಅಥವಾ ಶ್ರೀ ವಿಲ್ಲಿಪುತ್ತೂರಿಗಾಗಲೀ ಸೀಮಿತವಾಗಿಲ್ಲ. ಅಖಂಡ ಭಾರತವನ್ನು ವ್ಯಾಪಿಸಿದೆ. ಮತ್ತೆ ಶ್ರೀ ಕೃಷ್ಣನನ್ನು ಭಕ್ತಿ ಪ್ರೇಮಗಳಿಂದ ಅರ್ಚಿಸಿ ಅವನನ್ನು ತೃಪ್ತಿಗೊಳಿಸಲುಬೇಕಾಗುವ ಪಾಂಚಜನ್ಯ ಸಾರಂಗ, ಭೇರಿ, ಮೃದಂಗ ಮೊದಲಾದ ತಾಳವಾದ್ಯಗಳ ಹಾಗೂ ಸುಶ್ರಾವ್ಯವಾಗಿ ಅವನ ಗುಣಗಾನ ಮಾಡಲು ನರಸಿಭಗತ, ಮೀರಾಬಾಯಿ, ತುಕಾರಾಮರು ಮೊದಲಾದ ಭಗವದ್ಭಕ್ತರ ಸುಂದರ ವರ್ಣನೆಯನ್ನು ನಾವು ಕಾಣಬಹುದಾಗಿದೆ.

ಇಂತಹ ಭಕ್ತಭಕ್ತೆಯರ ಅನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ ಮುಂಬೆಳಕು ಎಂದು ಭಾವಾನುವಾದಕರು ತಮ್ಮ ಮಹದಾಶೆಯನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಈ ಗ್ರಂಥದಂತ್ಯದಲ್ಲಿ ತಮ್ಮ ಬಾವಾನುವಾದಗಳ ಅರ್ಥವನ್ನು ಸ್ಪಷ್ಟಪಡಿಸಲು ವಿಶದವಾದ ತಾತ್ಪರ್ಯವನ್ನೂ ಕೊಟ್ಟಿದ್ದಾರೆ.

ತಿರುಪ್ಪಾವೈ ನಂತರ ವಾರಣಮಾಯಿರ( ಮಾಂಗಲ್ಯ ಗೀತೆಗಳು ) ನ ಹತ್ತು ಗೀತೆಗಳಲ್ಲಿ ಶ್ರೀ ಗೋದಾದೇವಿಯವರು ಶ್ರೀಕೃಷ್ಣನ ಕೈಹಿಡಿದ ಪ್ರಸಂಗ ಕುರಿತು ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ ಎಂದು ಆನಂದ ಭರಿತರಾಗಿ ಹೇಳಿಕೊಂಡಿದ್ದಾರೆ. ***ಶ್ರೀ ಬಿ.ಎಸ್. ವೇಣುಗೋಪಾಲ್***ರವರು ಇವುಗಳ ಅತ್ಯಂತ ಮನ ಮೋಹಕ ಹಾಗೂ ಸುಂದರ ಭಾವಾನುವಾದ ಮಾಡಿದ್ದಾರೆ. ಅಂತ್ಯದಲ್ಲಿ ಫಲಶೃತಿಯನ್ನೂ ಕೊಟ್ಟಿದ್ದಾರೆ.

ಅನುವಾದಕರು ಮೂಲಕ್ಕೆ ಚ್ಯುತಿಬರದಂತೆ ಅನುವಾದಿಸಿದ್ದಾರೆ. ಇವರು ಕರಿಗಿರಿ (ದೇವರಾಯನದುರ್ಗ) ಶ್ರೀಲಕ್ಷ್ಮೀನರಸಿಂಹಸ್ವಾಮಿ ಸುಪ್ರಭಾತಂ ರಚಿಸಿ ಅಲ್ಲದೆ ಅನೇಕ ದೇವತಾ ಪ್ರಾರ್ಥನೆಗಳನ್ನು ಸ್ತುತಿಗಳನ್ನೂ ಗಾಯನಕ್ಕೆ ಅನುಕೂಲವಾಗುವಂತೆ **"ದಾಸಗೋಪಾಲ"** ಎಂಬ ಅಂಕಿತದಿಂದ ರಚಿಸಿದ್ದಾರೆ. ಅವುಗಳಲ್ಲಿ ಒಂದೆರಡನ್ನು ಈ ಕೃತಿಯಲ್ಲಿ ಕಾಣಬಹುದು.

ಇವರು ಕಾಯಕವೇ ಕೈಲಾಸವೆಂಬ ಬಸವಣ್ಣನವರ ತತ್ತ್ವವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿರುವ ಹಾಗೂ ನಿರಂತರ ಕಾಯಕವಿರಲಿ ಇಲ್ಲದಿರಲಿ ಹೃದಯದಲ್ಲಿ ರಾಮನಾಮವನ್ನೇ ಮಿಡಿಯುತ್ತಿರುವ ಭಾಗವತೋತ್ತಮರು.

ಇವರು ಪರಮಪವಿತ್ರವಾದ ಈ ಕೃತಿಯನ್ನು ಕರುನಾಡಿನ ಕನ್ನಡಿಗರಿಗೆ ನೀಡಿ ಇದರ ನಿತ್ಯಾನುಷ್ಠಾನದಿಂದ ನಮ್ಮನ್ನು ಶ್ರೀ ಗೋದಾದೇವಿಯವರ ಹಾಗೂ ಶ್ರೀ ಕೃಷ್ಣ ಪರಮಾತ್ಮನ ಕೃಪೆಗೆ ಪಾತ್ರರಾಗುವಂತೆ ಉಪಕರಿಸಿದ್ದಾರೆ.

ದೀನ ಬಂಧುವಾದ, ಪರಾತ್ಪರನಾದ ಶ್ರೀವೇಣುಗೋಪಾಲನು ಈ ನಮ್ಮ ವೇಣುಗೋಪಾಲರಿಗೆ ಹಾಗೂ ಇವರ ಕುಟುಂಬದವರಿಗೆ ಸರ್ವ ಸಂಪದವನ್ನು ಕೊಟ್ಟು ಜ್ಞಾನವೈರಾಗ್ಯವನ್ನು ಕರುಣಿಸಲೆಂದು ಪ್ರಾರ್ಥಿಸುತ್ತಾ ಮುಂದೆ ಇವರಿಂದ ಇಂತಹ ಅನೇಕ ಶ್ರೇಷ್ಠ ಕೃತಿಗಳು ರಚಿತವಾಗಲಿ ಎಂದು ಆಶಿಸುತ್ತೇನೆ.

ಶ್ರೀ ಅಂಡಾಳ್‌ತಿರುವಡಿಗಳೇ ಶರಣಂ

***ಶ್ರೀ ವೆಂಕಟರಾಂ ಭಾಗವತರ್***

ಶ್ರೀ ಗೋದಾಮಾತೆಯ ಕಿಂಕರ

**5.09.98**

ಓಬಳಾಪುರ ನೆಲಮಂಗಲ ತಾ.

ಬೆಂಗಳೂರು ಜಿಲ್ಲೆ.

## ತೇನವಿನಾ

ತೇನವಿನಾ ತೇನವಿನಾ ತೇನವಿನಾ
ತೃಣಮಪಿ ನ ಚಲತಿ ತೇನವಿನಾ ॥ ಪ ॥

ಯದುಶೈಲಪತೇ ತಿರುನಾರಾಯಣಾ
ತೃಣಮಪಿ ನ ಚಲತಿ ತೇನವಿನಾ ॥ ಅ. ಪ ॥

ರವಿಶಶಿ ಬೆಳಗಿಹರನುದಿನ ಇಳೆಯನು
ವಲ್ಮೀಕಾಲಯ ನಿನ್ನಯ ಕಣ್ಣಲಿ
ತಾರಾ ಪಥದಿ ನೀನೇ ಚಾಲನೆ
ಯತಿರಾಜ ವರದ ತಿರುನಾರಾಯಣನೆ ॥ ೧ ॥

ಗೌರಿಶಂಕರ ಗಿವನವೆಲ್ಲ ಹಾಡಿಹುವನುದಿನ
ನಲಿದಿದೆ ಗಂಗಾ ಸಿಂಧುಕಾವೇರೀ
ನಿನ್ನಾ ಕೊಳಲಿನ ಗಾನಾಮೃತದಿ
ವೇದಾದ್ರಿಯ ಮಡಿಲಲಿ ಧ್ವನಿಸಿದೆ ನಾದ ॥ ೨ ॥

ಹಾಲಾಹಾಲನು ಹಾಲೂ ನೀನೇ
ವೇದವ ತಂದವ ಗಿರಿಧರ ಮತ್ಸ್ಯನು
ಕೌಸಲ್ಯಾಸುತ ಜಾನಕಿ ರಮಣ
ದಾಮೋದರನೇ ದೇವಕಿ ತನಯನೇ ॥ ೩ ॥

ಸಲಹಿದೆ ಧರ್ಮನ ಅಳಿದನು ಕೌರವ
ಸೃಷ್ಟಿ ಸ್ಥಿತಿಯೂ ಲಯವೂ ನೀನೇ
ಆದಿ ಅನಂತ ನೀನೇ ನೀನೇ ನರಹರಿ ರೂಪಾ
ಶರಣ ನಿನ್ನಲಿ ದಾಸಗೋಪಾಲನ ಸರ್ವೇಶ್ವರನೆ ॥ ೪ ॥

## ನಂಬಿಬದುಕಿರೋ

(ಶ್ರೀ ರಾಗ - ಆದಿತಾಳ)

ನಂಬಿ ಬದುಕಿರೋ ನೀವೆಲ್ಲರೂ ಇಂದು
ಸರಸಿಜಾಕ್ಷ ಶ್ರೀ ಚೆಲುವ ನಾರಾಯಣನ್ನ ॥ ಪ ॥

ನರನ ತೇರನು ನಡೆಸಿ ಗೆಲಿಸಿದವನಿವನು
ಧರ್ಮನಂದನನಾ ಕುಲದೈವ ರುಕ್ಮಿಣೀ ರಮಣ ॥ ಅ.ಪ ॥

ವಿಷ್ಣುಚಿತ್ತರ ಮನದಲ್ಲಿ ಸತತ ನಲಿದವನಿವನು
ಪುಷ್ಪಮಾಲಿನಿಗೊಲಿದು ಮಾಲೆಯನು ಧರಿಸಿದನು
ಸಿರಿವಿಲ್ಲಿಪುತ್ತೂರು ಸಿರಗೋದೆಯರಸ ನಮ್ಮ
ಪಾಲ್ಗಡಲ ಶಯನ ಶ್ರೀರಂಗರಂಗ ಕರುಣಾಂತರಂಗನ್ನ ॥ ೧ ॥

ಗಿರಿಜಾಪತಿ ತಾ ಸತಿಗರುಹಿದ ತಾರಕ ನಾಮ
ವರವಿಭೀಷಣಗೊಲಿದ ಸುಗ್ರೀವ ಸಖನೋ
ಮುಖ್ಯಪ್ರಾಣಾಂತರ್ಗತ ಧರಣಿಜಾ ರಮಣ
ರವಿಚಂದ್ರ ನಯನ ರಘುಕುಲಾಂಬುದಿ ಸೋಮ ॥ ೨ ॥

ವೇದನಾದಾಂತರಂಗ ವೇದಾದ್ರಿನಿಲಯ ಗೀತಗೋವಿಂದ
ಕಂದಪ್ರಹ್ಲಾದನಿಗೊಲಿದ ಚೆಲುವ ನರಸಿಂಹನು
ಕುಲಶೇಖರರಾಧ್ಯಮೂರುತಿ ಹಯವದನ ಶ್ರೀಹರಿಯು
ದಾಸಗೋಪಾಲ ವರದ ಯದುಶೈಲನಾಥ ಚೆಲುವಚೆನ್ನಿಗನ್ನ ॥ ೩ ॥

॥ ಶ್ರೀಮತೇ ರಾಮುಜಾಯ ನಮಃ ॥

ಶ್ರೀಮದ್ ಅಖಂಡ ಭಾರತ ಶ್ರೀವೈಷ್ಣವ ಸಂಸ್ಕೃತಿ ಸೇವಾ ಆಶ್ರಮಮ್, ಶ್ರೀ ಆತ್ಮಾರಾಮ ಕ್ಷೇತ್ರ

ನರಸೀಪುರ, ನೆಲಮಂಗಲ ತಾಲ್ಲೂಕು, ಬೆಂಗಳೂರು ಜಿಲ್ಲೆ.







# ನಮಿಪೆನಾದಿಯಲಿ

## ಮಾತೃ ದೇವೋ ಭವ ಪಿತೃದೇವೋಭವ ಆಚಾರ್ಯ ದೇವೋ ಭವ

ನಮಿಪೆನಾದಿಯಲಿ ಮಾತೆ ಅರವಿಂದ ತಾಯಾರು ಅಕ್ಕ ಜನನಿ ಭಾರತಿಯು, ಪಿತನೆ ಭಾರತೀ ರಮಣ ತಿರುನಾರಾಯಣಾಚಾರ್ಯ ತಾವರೇಕೆರೆ ಶ್ಯಾಮಣ್ಣ ಅಣ್ಣ. ನಮಿಪೆ ಶ್ರೀಶೈಲಪೂರ್ಣ ಕಾಂತಿಮತಿಯರ ಕಂದ ಯತಿರಾಜ ರಾಮಾನುಜರ ಚರಣಗಳಲಿ ನಮಿಪೆ ಯದುಗಿರಿ ಯತಿರಾಜ ಸಂಪತ್‌ಕುಮಾರ ರಾಮಾನುಜ ಜೀಯರ್ ತಿರುವಡಿಗಳಲಿ ಮತ್ತೆ ನಮಿಪೆ ಯೋಗಿವರ್ಯ ಶ್ರೀರಂಗಪ್ರಿಯ ದೇಶಿಕರ ಚರಣಕಮಲಗಳಲಿ ಪೊಡಮಡುವೆ ವೇದ ಮಾತೆ ಶ್ರೀವೈಷ್ಣವ ಕುಲಕಲ್ಪವಲ್ಲಿ ಗೋದಾದೇವಿಯ ಶ್ರೀ ಚರಣಗಳಲ್ಲಿ. ಓ ಮಾತೆ ನೀನುಲಿದ ಹೊನ್ ತಮಿಳು ತಿರುಪ್ಪಾವೈ ವೇದಗೀತೆಗಳ ಕಸ್ತೂರಿ ಕನ್ನಡಕೆ ಪಾಡುವಂತೆನ್ನ ಜಿಹ್ವೆಯಲಿ ನೆಲೆಸಿ ಹರಸಿದೆ ನೀ ನೀನಮಿತ ಕಾರುಣ್ಯ ಸಿಂಧು. ಹರಸಿರೆಲ್ಲರೊಮ್ಮನದಿಂದ ದಾಸಗೋಪಾಲನನು ಮೇಣ್ ಸತಿ ಯಶೋದೆಯೊಲುಮೆಯ ಸಂತತಿಯ. ಶರಣು ಶರಣೆಂದೆ ಶಿರಬಾಗಿ ನಿಮ್ಮಡಿದಾವರೆಗಳಲಿ ಬಾರಿಬಾರಿಗೆ ಭಾಗವತೋತ್ತಮರೆ.

ಎಂಬತ್ನಾಲ್ಕು ಲಕ್ಷ ಯೋನಿಗಳಲ್ಲಿ ಜನಿಸಿ, ಕಾಲಕಾಲಕ್ಕೆ ಸಂಚಯಿಸಿದ ಪುಣ್ಯ ಫಲದಿಂದ ಮಾನವರಾಗಿ ಶ್ರೀವೈಷ್ಣವರೆನಿಸಿಕೊಳ್ಳುವುದೊಂದು ಆ ಪರಮಪರಂಧಾಮ ಪಾಲ್ಗಡಲ ಶಯನನ ಕರುಣಾ ಕಟಾಕ್ಷ ಹೀಗೆ ಮಾನವರಾಗಿ ಜನಿಸಿದ ನಂತರ ಮತ್ತೆ ಮತ್ತೆ ಜನನ ಮರಣಗಳ ಜಾಲದಲ್ಲಿ ಸಿಲುಕದಂತೆ ಭವ ಬಂಧನಗಳಿಂದ ಮುಕ್ತರಾಗಬೇಕಾದರೆ, ಈಗ ನಮಗೆ ದೊರೆತಿರುವ ಈ ಸದವಕಾಶವನ್ನು ಉಪಯೋಗಿಸಿಕೊಂಡು ಸಚ್ಚಿದಾನಂದ ಸ್ವರೂಪ ಶ್ರೀರಂಗರಂಗನನ್ನು ಧ್ಯಾನಿಸಿ, ಪೂಜಿಸಿ ಧನ್ಯರಾಗಬೇಕು.

ಈ ಮುಕ್ತಿಮಾರ್ಗಕ್ಕೆ ವ್ರತನಿಯಮಗಳು ಅತ್ಯಾವಶ್ಯಕ. ಇಂದೂ ಸಹ ನಾವು ಮನೆಮನೆಗಳಲ್ಲಿ ಅನೇಕ ಪೂಜಾ ಕೈಂಕರ್ಯಗಳನ್ನು ಬಂಧುಮಿತ್ರರೊಡಗೂಡಿ ಮಾಡುತ್ತಿದ್ದೇವೆ. ಅಂತಹ ವ್ರತಗಳಲ್ಲಿ ಅತ್ಯಂತ ಶ್ರೇಷ್ಠವಾದ ವ್ರತ "ಮಾರ್ಗಶೀರ್ಷ ವ್ರತ" ಇದನ್ನು ಆಚರಿಸಲು ನಮಗೆ ಮಾರ್ಗದರ್ಶನ ನೀಡಿ ಪಾಡುಪಾಡುತ್ತ ನಮ್ಮನ್ನು ಎಚ್ಚರಿಸಿದ ಭಾರತಿಯ ತನುಜಾತೆಯಾದ ಗೋದಾದೇವಿ ಈ ವ್ರತವನ್ನು ಕೇವಲ ನಾವು ಮಾತ್ರ ನಮ್ಮ ನಮ್ಮ ಮನೆಗಳಲ್ಲಿ ಮಾಡಿಕೊಂಡರೆ ಸಾಲದು. ವ್ರತವನ್ನು ಮಾಡುವಾಗ ಭಕ್ತ ಬಂಧುಗಳನ್ನೂ ಸಹ ಸೇರಿಸಿಕೊಂಡು ವ್ರತಾಚರಣೆ ಮಾಡಬೇಕು ಇದರಿಂದ ಲೋಕಕ್ಕೆ ಕಲ್ಯಾಣ ಉಂಟಾಗುತ್ತದೆ ಎಂಬ ಸೂಕ್ಷ್ಮವನ್ನು ತನ್ನ ೩೦ ದಿವ್ಯ ಪಾಶುರಗಳಲ್ಲಿ ಸಾರಿ ಸಾರಿ ಹೇಳಿದ್ದಾಳೆ.

ಈ ಕೃತಿಯನ್ನು ಓದಿ ಕೇಳಿ ಆನಂದಿಸಿ ನನ್ನನನವರತ ಆಶೀರ್ವದಿಸಿದ ಹಿರಯಣ್ಣ ಅತ್ತಿಗೆ ಸೌ|| ಅನುಸೂಯಮ್ಮ ಕೆ.ಎನ್. ಮುತ್ತುರಾಜು, ಸದಾಶಿವನಗರ, ಬೆಂಗಳೂರು, ಸೌ|| ಸೌಭಾಗ್ಯಮ್ಮ ಪದ್ಮನಾಭಯ್ಯ, ಶ್ರೀನಿವಾಸನಗರ, ಬೆಂಗಳೂರು, ಓಬಳಾಪುರದ ವೆಂಕಟರಾಂ ಭಾಗವತರ್ ದಂಪತಿಗಳಿಗೆ ಹಾಗೂ ನನ್ನೆಲ್ಲ ಇಷ್ಟಮಿತ್ರರು, ಬಂಧುಭಗಿನಿಯರು ಗುರುಹಿರಿಯರೆಲ್ಲರಿಗೆ ನನ್ನ ಕೃತಜ್ಞತೆಯ ನಮನಗಳು.

ಪ್ರಮುಖವಾಗಿ ಈ ಕೃತಿ ಬೆಳಕು ಕಾಣಲು ಕಾರಣರಾದ ಉ|| ವೇ|| ಕೆ.ಎಸ್. ಜಗನ್ನಾಥ್, ಪ್ರಾಂಶುಪಾಲರು, ಸರ್ಕಾರಿ ಬಾಲಕರ ಪದವಿ ಪೂರ್ವ ಕಾಲೇಜು, ಉಡುಪಿ ಮತ್ತು ಬೆಂಗಳೂರಿನ ಶ್ರೀ ರಾಮಾನುಜ ಸೇವಾ ಟ್ರಸ್ಟಿನ ಹಿರಿಯಣ್ಣ ಶ್ರೀ ತಿರುವರ್ಯರಾದಿ ಎಲ್ಲ ಟ್ರಸ್ಟಿ ಸದಸ್ಯರುಗಳಾದ ಭಾಗವತೋತ್ತಮರಿಗೆ ನನ್ನ ಶಿರಸಾಷ್ಟಾಂಗ ನಮನಗಳು.

**ಯದುಶೈಲನಾಥನು ಎಲ್ಲರಿಗೂ ಸನ್ಮಂಗಳವನ್ನುಂಟುಮಾಡಲಿ.**

**ಜೈ ಶ್ರೀರಾಂ**



**ಅಡಿಯೇನ್ ರಾಮಾನುಜ ದಾಸನ್**

"ದಾಸಗೋಪಾಲ"

(ಅರ್ಚಕ ವೇಣುಗೋಪಾಲ್ ಬಿ.ಎಸ್. ಮೈಸೂರು)



॥ ಶ್ರೀಮತೇ ರಾಮಾನುಜಾಯ ನಮ: ॥





# ಶ್ರೀ ಗುರುಸ್ತುತಿ



ಶುಕ್ಲಾಂಬರಧರಂ ವಿಷ್ಣುಂ ಚತುರ್ಭುಜಮ್
ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ

ಅಗಜಾನನ ಪದ್ಮಾರ್ಕಂ ಗಜಾನನಮಹರ್ನಿಶಂ
ಅನೇಕ ದಂ ತಂ ಭಕ್ತಾನಾಂ ಏಕ ದಂತಂ ಉಪಾಸ್ಮಹೇ

ಗುರುಬ್ರಹ್ಮಾ ಗುರುರ್ವಿಷ್ಣು ಗುರದೇವೋ ಮಹೇಶ್ವರ:
ಗುರುರೇವ ಪರಂ ಬ್ರಹ್ಮ ತಸ್ಮೈಶ್ರೀ ಗುರವೇ ನಮ:

ಅನೇಕ ಜನ್ಮ ಸಂಪ್ರಾಪ್ತ ಕರ್ಮಬಂಧವಿದಾಹಿನೇ
ಆತ್ಮಜ್ಞಾನ ಪ್ರಧಾನೇನ ತಸ್ಮೈಶ್ರೀ ಗುರವೇ ನಮ:



ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನ ಮೂರ್ತಿಂ
ದ್ವಂದ್ವಾತೀತಂ ಗಗನ ಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್
ಏಕಂ ನಿತ್ಯಂ ವಿಮಲಮಚಲಂ ಸರ್ವಧೀ ಸಾಕ್ಷೀ ಭೂತಂ
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ

ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನಮಧ್ಯಮಾಂ
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಂ

– ವಿಶ್ವಸಾರತಂತ್ರ

# ಪ್ರಾರ್ಥನೆ

ಶುಕ್ಲಾಂಬರಧರಂ ವಿಷ್ಣುಂ ಚತುರ್ಭುಜಂ
ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ

ಗಜಾನನಂ ಭೂತ ಗಣಾಧಿ ಸೇವಿತಂ, ಕಪಿತ ಜಂಬೂಫಲ ಸಾರಭಕ್ಷಿತಂ
ಉಮಾಸುತಂ ಶೋಕವಿನಾಶ ಕಾರಣಂ ನಮಾಮಿ ವಿಘ್ನೇಶ್ವರ ಪಾದಪಂಕಜಂ

ಯಸ್ಯದ್ವಿರದವಕ್ತ್ರಾದ್ಯಾಃ ಪಾರಿಷದ್ಯಾ ಪರಿಶ್ಶತಮ್
ವಿಘ್ನಂ ನಿಘ್ನಂತಿ ಸತತಂ ವಿಷ್ವಕ್ಸೇನಂ ತಮಾಶ್ರಯೇ

ದಿವ್ಯಾಕಾರಂ ಸರೋಜಾಕ್ಷಂ ಶಂಖಚಕ್ರಗಧಾ ಧರಂ
ಮುಕುಂದ ದ್ವಾರನಿಲಯಂ ವಿಶ್ವಕ್ಸೇನಂ ತಮಾಶ್ರಯೇ.

ಶಾರದಾ ಶಾರದಾಮ್ಭೋಜ ವದನಾ ವದನಾಮ್ಬುಜೇ
ಸರ್ವದಾ ಸರ್ವದಾಸ್ಮಾಕಂ ಸನ್ನಿಧಿ : ಸನ್ನಿಧಿಂ ಕ್ರಿಯಾತ್.

ಸುರಾಸುರ ಸೇವಿತ ಪಾದ ಪಂಕಜಾ, ಕರೇ ವಿರಾಜತ್ಕಮನೀಯ ಪುಸ್ತಕಾ,
ವಿರಿಂಚಿಪತ್ನೀ ಕಮಲಾಸನ ಸ್ಥಿತಾ, ಸರಸ್ವತೀ ನೃತ್ಯತು ವಾಚಿಮೇ ಸದಾ.

ಯಾಕುಂದೇಂದು ತುಷಾರ ಹಾರಧವಲಾ ಯಾ ಶುಭ್ರವಸ್ತ್ರಾನ್ವಿತಾ
ಯಾ ವೀಣಾವರದಂಡಮಂಡಿತಕರಾ ಯಾ ಶ್ವೇತ ಪದ್ಮಾಸನಾ,
ಯಾ ಬ್ರಹ್ಮಾಚ್ಯುತ ಶಂಕರಪ್ರಭೃತಿರ್ಭಿರ್ದೇವೈ ಸದಾ ಪೂಜಿತಾ
ಸಾಮಾಂ ಪಾತು ಸರಸ್ವತೀ ಭಗವತೀ ನಿಶ್ಶೇಷ ಜಾಡ್ಯಾಪಹಾ

ಸರಸ್ವತಿ ಮಹಾಭಾಗೇ ವಿದ್ಯೇ ಕಮಲಲೋಚನೆ
ವಿಶ್ವರೂಪೇ ವಿಶಾಲಾಕ್ಷಿ ವಿದ್ಯಾಂ ದೇಹಿ ನಮೋಸ್ತುತೇ

ಸಾಮೇ ವಸತು ಜಿಹ್ವಾಯಾಂ ವೀಣಾಪುಸ್ತಕ ಧಾರಿಣೀ,
ಮುರಾರೀ ವಲ್ಲಭಾ ದೇವೀ ಸರ್ವಶುಕ್ಲಾ ಸರಸ್ವತೀ.

ಶ್ವೇತಪದ್ಮಾಸನಾ ದೇವಿ ಶ್ವೇತ ಪುಷ್ಪೋಪಶೋಬಿತಾ
ಶ್ವೇತಾಂಬರಧರಾ ನಿತ್ಯಾ ಶ್ವೇತಗಂಧಾನು ಲೇಪನಾ,
ಶ್ವೇತಾಕ್ಷಸೂತ್ರ ಹಸ್ತಾಚ ಶ್ವೇತ ಚಂದನ ಚರ್ಚಿತಾ
ಶ್ವೇತ ವೀಣಾಧರಾ ಶುಭ್ರಾ ಶ್ವೇತಾಲಂಕಾರಭೂಷಿತಾ.

ವಂದಿತಾ ಸಿದ್ಧಗಂಧರ್ವೈರರ್ಚಿತಾ ಸುರದಾನವೈ:
ಪೂಜಿತಾ ಮುನಿಭಿಃ ಸರ್ವೈರ್ಋಷಿಭಿ : ಸ್ತೂಯತೇ ಸದಾ.

ಸ್ತೋತ್ರೇಣಾನೇನ ತಾ ದೇವೀಂ ಜಗದ್ಧಾತ್ರೀಂ ಸರಸ್ವತೀಮ್
ಯೇ ಸ್ಮರಂತಿ ತ್ರಿಸಂಧ್ಯಾಯಾಂ ಸರ್ವಾಂ ವಿದ್ಯಾಂ ಲಭಂತಿತೇ

ನಮಸ್ತೇ ಸದಾ ವತ್ಸಲೇ ಸರಸಿಜ ನಿಲಯೇ, ಗಾಯತ್ರಿ ಓಂಕಾರ ರೂಪಿಣಿಯೇ
ನಮಸ್ತೇ ಮಾಹಾಬಲ ಶೈಲ ನಿಲಯೇ ಚಾಮುಂಡೇಶ್ವರಿಯೆ ತಾಯೆ ಭಾರತಿಯೆ ನಮಸ್ತೇನ್ನಮಃ

ಮನೋಜವಂ ಮಾರುತತುಲ್ಯವೇಗಂ, ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಮ್
ವಾತಾತ್ಮಜಂ ವಾನರಯೂಥ ಮುಖ್ಯಂ, ಶ್ರೀರಾಮಧೂತಂ ಶಿರಸಾ ನಮಾಮಿ.

ಯತ್ರಯತ್ರ ರಘುನಾಥ ಕೀರ್ತನಂ ತತ್ರತತ್ರ ಕೃತಮಸ್ತಕಾಂಜಲಿಂ
ಭಾಷ್ಪವಾರಿ ಪರಿಪೂರ್ಣ ಲೋಚನಂ ಮಾರುತಿಂ ನಮತಾಂ ರಾಕ್ಷಾಸಾಂತಕಂ

ವಿಶುದ್ಧಂ ಪರಂ ಸಚ್ಚಿದಾನಂದರೂಪಂ ಗುಣಾಧಾರಮಾಧಾರಹೀನಂ ವರೇಣ್ಯಂ
ಮಹಾಂತಂ ವಿಭಾಂತಂ ಗುಹಾಂತಂ ಗುಣಾಂತಂ, ಸುಖಾಂತಂ ಸ್ವಯಂ ಧಾಮರಾಮುಪ್ರಪದ್ಯೇ

ಮಹಾರತ್ನಪೀಠೇ ಶುಭೇ ಕಲ್ಪಮೂಲೆ, ಸುಖಾಸೀನ ಮಾದಿತ್ಯಕೋಟಿ ಪ್ರಕಾಶಮ್
ಸದಾ ಜಾನಕೀ ಲಕ್ಷ್ಮಣೋಪೇತಮೇಕಂ ಸದಾ ರಾಮಚಂದ್ರಂ ಭಜೇ ಹಂ ಭಜೇ ಹಂ.

ಮಂಗಳಂ ಶ್ರೀ ಸೀತಾಮನೋಲ್ಲಾಸ ಮಂದಸ್ಮಿತ ವದನಾರವಿಂದಂ
ಸೀತಾಲಕ್ಷ್ಮಣ ಭರತಶತೃಘ್ನ ಹನುಮತ್ ಸುದರ್ಶನಾಶ್ರಿತ ಪಾದಪದ್ಮಂ
ಭಕ್ತಾಭೀಷ್ಟ ವರದಂ ಚಾರುಹಾಸೋಲ್ಲಾಸಂ ಕೋಟಿ ಸೂರ್ಯ ಸಮಪ್ರಭಂ
ಮಂಗಳಂ ನರಸೀಪುರಾಧೀಶಂ ಆತ್ಮಾರಾಮಂ ವಂದೇ ಜಗದ್ಗುರುಂ.

ಕುಂಕುಮಾಂಕಿತ ವರ್ಣಾಯ ಕುಂದೇಂದು ಧವಳಾಯಚ
ವಿಷ್ಣು ವಾಹನಂ ಸಮಸ್ತುಭ್ಯಂ ಪಕ್ಷಿರಾಜಾಯತೇ ನಮಃ

ಜ್ಞಾನಾನಂದ ಮಯಂ ದೇವಂ ನಿರ್ಮಲ ಸ್ಪಟಿಕಾಕೃತಿಂ
ಆಧಾರಂ ಸರ್ವ ವಿದ್ಯಾನಾಂ ಹಯಗ್ರೀವಮುಪಾಸ್ಮಹೇ

ಜಯತು ಜಯ ದೇವೋ ದೇವಕೀನಂದನೋಯಂ
ಜಯತು ಜಯತು ಕೃಷ್ಣೋ ವೃಷ್ಣಿವಂಶ ಪ್ರದೀಪ:
ಜಯತು ಜಯತು ಮೇಘಶ್ಯಾಮಲ: ಕೋಮಲಾಂಗೋ
ಜಯತು ಜಯ ಪೃಥ್ವೀಭಾರ ನಾಶೋ ಮುಕುಂದ:

ನಮಾಮಿ ನಾರಾಯಣ ಪಾದಪಂಕಜಂ, ಕರೋಮಿ ನಾರಾಯಣ ಪೂಜನಂ ಸದಾ
ನಮಾಮಿ ನಾರಾಯಣ ನಾಮ ನಿರ್ಮಲಂ, ಸ್ಮರಾಮಿ ನಾರಾಯಣ ತತ್ತ್ವಮವ್ಯಯಂ

ಶ್ರೀಶೈಲೇಶ ದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಂ
ಯತೀಂದ್ರ ಪ್ರವಣಂ ವಂದೇ ರಮ್ಯಜಾ ಮಾತರಂ ಮುನಿಂ.

ರಾಮಾನುಜ ದಯಾಪಾತ್ರಂ ಜ್ಞಾನವೈರಾಗ್ಯ ಭೂಷಣಂ
ಶ್ರೀಮದ್ವೆಂಕಟನಾಥಾಯಂ ವಂದೇ ವೇದಾಂತ ದೇಶಿಕಂ
ಶ್ರೀಮಾನ್ ವೆಂಕಟನಾಥಾರ್ಯ ಕವಿತಾರ್ಕಿಕ ಕೇಸರೀ
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ.

ಯೋನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ
ಅಸ್ಮದ್ಗುರೋರ್ ಭಗವತೋಸ್ಯ ದಯೈಕ ಸಿಂಧೋ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ.

ಮಾತಾಪಿತಾಯುವತನಯಸ್ತನಯೂವಿಭೂತಿಃ
ಸರ್ವಂಯದೇವ ನಿಯಮೇನಮಧನ್ವಯಾನಾಂ
ಆದ್ಯಸ್ಯನಃ ಕುಲಪತೇರ್ವಕುಳಾಬಿರಾಮಂ
ಶ್ರೀಮತ್ ತದಂಘ್ರಿಯುಗಳಂ ಪ್ರಣಮಾಮಿ ಮೂರ್ದ್ನಾ.

ಭೂತಂಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀ ಭಕ್ತಿಸಾರ ಕುಲಶೇಖರ ಯೋಗಿವಾಹಾನ್
ಭಕ್ತಾಂಘ್ರಿರೇಣು ಪರಕಾಲ ಯತೀಂದ್ರ ಮಿಶ್ರಾನ್
ಶ್ರೀಮತ್ ಪರಾಂಕುಶಮುನಿಂ ಪ್ರಣಿತೋಸ್ಮಿ ನಿತ್ಯಂ.

ಗುರುಮುಖಮನದೀತ್ಯ ಪ್ರಾಹ ವೇದಾನಶೇಷಾನ್
ನರಪತಿ ಪರಿಕ್ಲಿಪ್ತ ಶುಲ್ಕಮಾದಾತು ಕಾಮಃ
ಶ್ವಶುರಮಮರ ವಂದ್ಯಂ ರಂಗನಾಥಸ್ಯ ಸಾಕ್ಷಾತ್
ದ್ವಿಜಕುಲ ತಿಲಕಂ ತಂ ವಿಷ್ಣುಚಿತ್ತಂ ನಮಾಮಿ.

ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನಮಧ್ಯಮಾಂ
ಅಸ್ಮದಾಚಾರ್ಯ ಪರ್ಯಂತಾಂವಂದೇ ಗುರು ಪರಂಪರಾಂ.

ಶ್ರೀರಂಗಮಂಗಳ ಮಣಿಂ ಕರುಣಾ ನಿವಾಸಂ
ಶ್ರೀ ವೆಂಕಟಾದ್ರಿ ಶಿಖರಾಲಯ ಕಾಳಮೇಘಂ
ಶ್ರೀಹಸ್ತಿಶೈಲ ಶಿಖರೋಜ್ವಲ ಪಾರಿಜಾತಂ
ಶ್ರೀಶಂ ನಮಾಮಿ ಶಿರಸಾ ಯದುಶೈಲನಾಥಂ.

ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ
ವಿಶ್ವಾಕಾರಂ ಗಗನ ಸದೃಶಂ ಮೇಘವರ್ಣಂ ಶುಭಾಂಗಂ
ಲಕ್ಷ್ಮೀಕಾಂತಂ ಕಮಲ ನಯನಂ ಯೋಗಿ ಹೃದ್ಧ್ಯಾನಗಮ್ಯಂ
ವಂದೇ ವಿಷ್ಣುಂ ಭರಭಯ ಹರಂ ಸರ್ವ ಲೋಕೈಕ ನಾಥಂ.

ಪ್ರಹ್ಲಾದ ನಾರದ ಪರಾಶರ ಪುಂಡರೀಕ
ವ್ಯಾಸಾಂಬರೀಶ ಶುಕಶೌನಕ ಭೀಷ್ಮಲಾಲ್ಯಾನ್
ರುಕ್ಮಾಂಗದಾರ್ಜುನ ವಸಿಷ್ಟ ವಿಭೀಷಣಾಧೀನ್
ಪುಣ್ಯಾನಿಮಾನ್ ಪರಮ ಭಾಗವತಾನ್ ಸ್ಮರಾಮಿ.

ಶ್ರೀ ಆತ್ಮಾರಾಮ ಪರಬ್ರಹ್ಮಣೇ ನಮಃ



॥ ಓಂ ಶ್ರೀಯೈ ನಮಃ ॥

## ಮಾತೃವಂದನಾ

ಭಕ್ತ ರಕ್ಷಣೆಗೆಂದು ಭುವಿಗಿಳಿದು ಬಂದವನ
ಶ್ರೀರಮಣ ಪಾಲ್ಗಡಲ ಶಯನನನು
ಪದುಮನಾಭ ಯದುನಂದನ ಗೋವಿಂದ ಗೋಪಾಲನನು
ಯೋಗನಿದ್ರೆಯಿಂದೆಳ್ಚರಿಸಿ ಒಲುಮೆಯಲಿ
ಭಕ್ತ ರಕ್ಷಕನೆಂಬಬಿದಾನವನು ಉಳಿಸಿಕೊಳ್ಳೆಂದು
ಅನುನಯದಿ ಪಾಡಿದಾ ಶ್ರೀ ವಿಷ್ಣುಚಿತ್ತ ಮುನಿ ತನಯೆ
ಶ್ರೀತುಳಸಿ ವನಸಂಜಾತೆ ಅಯೊನಿಜೆ ತಿರುಪ್ಪಾವೈ ಗೀತಾಚಾರ್ಯೆ
ಮಾತೆ ಗೋದೆಯ ಪಾದ ಪದುಮಕೆನ್ನ ಸಾಷ್ಟಾಂಗ ನಮನ ॥ ೧ ॥

ಭೋಗಭಾಗ್ಯಗಳಲಿ ತೋಳಲಿ ಬಳಲುವಾ
ಚೇತನನಚೇತನನಾಗದಂತೆ ಮಾತೆ ಮಮತೆಯಲಿ
ಪಾಡುತೆಳ್ಚರಿಸಿ ಭಕ್ತಿ ಯಮುನೆಯೊಳ್ಮೀಯಿಸುತ
ಮಂಗಳದ ಮಾರ್ಗಶಿರ ವ್ರತವನಾಚರಿಸುತ್ತಾ
ಗರುಡ ಗಮನ ರುಕ್ಮಿಣೀ ರಮಣ ಶ್ರೀ ಹರಿಯ
ಚರಣ ಕಮಲಗಳಿಗೆರಗಿ ಎಲ್ಲರೊಂದಾಗಿ ಬೇಡಿ
ಮುಕುಂದನ ಮನೆಗೈವಂತೆಮ್ಮ ಪಾಡುತೆಳ್ಚರಿಸಿದಾ
ತಿರುಪ್ಪಾವೈ ಗೀತಾಚಾರ್ಯೆ ಭಾರತಿಗೆನ್ನ ಸಾಷ್ಟಾಂಗ ನಮನ ॥ ೨ ॥

ನಲಿವ ರಾಜಹಂಸಗಳಿಂದ ಸಂತತವು ರಾರಾಜಿಸುವ
ಸರೋವರ ಸಾವಿರಗಳಲಿ ತುಂಬಿ ಕಂಗೊಳಿಪ
ನಿತ್ಯ ಹರಿದ್ವರ್ಣ ಪುಷ್ಪ ವನರಾಜಿಯಿಂ ಬೆಳಗಿರುವ
ಪರಿಪರಿಯ ಪುಷ್ಪಗಳ ಸಿರಿಯ ಸೌರೂರೆಂದಧಿಕದಲಿ
ಕಂಗೊಳಿಪ ಸಿರಿವಿಲ್ಲಿಪುತ್ತೂರಿನಾ ಸಿರಿದೇವಿ ಸಸ್ಯಶ್ಯಾಮಲೆಗೆ
ಮುಡಿದ ಮಾಲೆಯನಿತ್ತು ಶ್ರೀರಂಗರಂಗ ಕಾವೇಟಿ ರಂಗನಿಗೆ
ಮಂಗಳಾಂಗನ ಹೃದಯೇಶ್ವರಿಯಾದ ಸಿರಿದೇವಿಗೆ
ತಿರುಪ್ಪಾವೈ ಗಿತಾಚಾರ್ಯೆ ಭಾರತಿಗೆನ್ನ ಸಾಷ್ಟಾಂಗ ನಮನ ॥ ೩ ॥

ಭಕ್ತಿ ಮುಕ್ತಿಗೆ ಮಾರ್ಗವೆಂದತಿಶಯದಿ ಭಕುತಿಯಲಿ
ಪರಿಪರಿಯ ಪುಷ್ಪ ಮಾಲೆಗಳನನುದಿನವು ಅರ್ಪಿಸುತ
ಶೇಷಶಯನನ ಸೇವೆಯಲಿ ಮುಕ್ತಿ ಮಾರ್ಗವ ಕಂಡ
ಶ್ರೀ ವಿಷ್ಣುಚಿತ್ತ ಮುನಿ ಕರಕಮಲ ಸಂಜಾತೆ
ಸಿರಿವಾರಿಜಾತೆ ಚಂದ್ರಸೋದರಿಗೆ ಮಾತೆ ಗೋದೆಗೆ
ಶ್ರೀವೈಷ್ಣವ ಸತತಮರ್ಚಿತ ಪಾದ ಪದುಮೆಗೆ
ವಿಶ್ವ ಮಾತೆಗೆ ವಿಮಲ ಚರಿತೆಗೆ ವಿಬುಧ ವಂದಿತೆಗೆ
ತಿರುಪ್ಪಾವೈ ಗೀತಾಚಾರ್ಯೆ ಭಾರತಿಗೆನ್ನ ಸಾಷ್ಟಾಂಗ ನಮನ ॥ ೪ ॥

ಕಂದ ನಿನ್ನವನು ನಮಿಸಿಹೆನು ಭಕುತಿಯಲಿ ಶಿರಬಾಗಿ
ಕೈ ಪಿಡಿದು ನಡೆಸೆನ್ನನೀ ಇರುಳ ಬಾಳಿನಲಿ
ಜನಕ ಜನನಿ ನೀ ಸಕಲಕ್ಕೆ ವಿಶ್ವ ಮಾತೆಯೆ ಭಾರತಿಯೆ
ನಂದನಂದನನೊಡತಿ ರುಕ್ಮಿಣಿಯೆ ಹೇ ಜಗನ್ಮಾತೇ
ಶರಣು ನಿನ್ನಡಿದಾವರೆಗಳಲಿ ದಾಸಗೋಪಾಲನಾ ಮಾತೆ ಸೀತೆ
ಭವ್ಯೆ ಭಾರತಿಯೆ ವೇದ ಮಾತೆಯೆ ಓಂಕಾರ ನಾದಾತ್ಮಳೇ
ತಿರುಪ್ಪಾವೈ ಗೀತಾಚಾರ್ಯೆ ತಾಯೆ ಗೋದಾದೇವಿ
ಶರಣು ನಿನ್ನಡಿದಾವರೆಗಳಲಿ ಶರಣು ನಿನ್ನಡಿದಾವರೆಗಳಲಿ ॥ ೫ ॥

## ತನಿಯನ್‌ಗಳು (ಧ್ಯಾನಶ್ಲೋಕಗಳು)

*ನೀಳಾ ತುಂಗಸ್ತನ ಗಿರಿತಟೀ ಸುಪ್ತಮುದ್ಬೋಧ್ಯ ಕೃಷ್ಣಂ*
*ಪಾರಾರ್ಥ್ಯಂ ಸ್ವಂ ಶ್ರುತಿಶತಶಿರಸ್ಸಿದ್ಧಂ ಮಧ್ಯಾಪ್ಯಯಂತೀ*
*ಸ್ವೋಚ್ಛಿಷ್ಟಾಯಾಂ ಸ್ರಜಿ ನಿಗಳಿತಂ ಯಾ ಬಲಾತ್ಕೃತ್ಯ ಭುಂಕ್ತೇ*
*ಗೋದಾ ತಸ್ಯೈ ನಮ ಇದಮಿದಂ ಭೂಯ ಏವಾಸ್ತು ಭೂಯಃ*

-ಪರಾಶರ ಭಟ್ಟರು

**ಭಾವಾನುವಾದ:-**

ನಿಜಭಕ್ತಿ ರಸ ಕ್ಷಿರಾಂಬುಧಿ ನೀಳಾದೇವೀ ಸ್ತನ ಗಿರಿಗಳೊಳಗಾನಂದದಲಿ
ಯೋಗ ನಿದ್ರಾಭರಿತನಾಗಿಹ ಅಗಣಿತ ಮಹಿಮಾಂತರಂಗ ಪರಮನನೆಳ್ಚರಿಸಿ
ನಿನ್ನವರಿರುವರಮಿತ ಯೋಗಿಗಳ್ ಮರೆಯದಿರೆಂದುಪನಿಷದ್ಗಳನರುಹಿ
ತಾ ಮುಡಿದ ಮಾಲೆಯನಿತ್ತು ಮುರುಳೀ ಮಾಧವನ ಮನವ ಸೆಳೆದಂಥ
ಶ್ರೀನಿಧಿಯ ಹೃತ್ಕಮಲ ವಾಸಿನಿಯಾದೆಮ್ಮ ವೇದಮಾತೆ ಮಾತೆ ಪೃಥ್ವಿಗೆ
ಶ್ರೀ ವಿಷ್ಣುಚಿತ್ತ ಮುನಿ ಕರಕಮಲ ಸಂಜಾತೆ ಗೋದೆಗೆಮ್ಮನಂತಾನಂತ ನಮನ

( ೨ )

*ಅನ್ನವಯಿಲ್ ಪುದುವೈ ಯಾಂಡಾಳ್ ಅರಂಗರ್ಕು*
*ಪ್ಪನ್ನು ತಿರುಪ್ಪಾವೈ. ಪಲ್ ಪದಿಕಂ ಇನ್ನಿಶೈಯಲ್*
*ಪಾಡಿಕೊಡುತ್ತಾಳ್ ನಲ್ ಪಾಮಾಲೈ ಪೂಮಾಲೈ*
*ಶೂಡಿಕೊಡುತ್ತಾಳ್ ಶೊಲ್*

*ಪಯ್ಯಕೊಂಡಾರಾ(ಪುಂಡರೀಕಾಕ್ಷರು)*

**ಬಾವಾನುವಾದ:**

ಸದಾ ಹಂಸ ಸಾಸಿರಗಳಿಂ ಕಂಗೊಳಿಪ ಸಿರಸರೋವರಗಳ ಸಿರಿಯೂರು
ಸಿರಿವಿಲ್ಲಿಪುತ್ತೂರಿನಾ ಸಿರಿವಾರಿಜಾತೆ ಗೋದಾ ದೇವಿಯ ಸಿರಿಪಾದದಲ್ಲಿ
ಅರೈದು ಗೀತಮಾಲೆಯ ನೆಯ್ದೆಮ್ಮನಂತಾನಂತನನ್ನು ಎಳ್ಚರಿಸಲಂಕರಿಸಿದಾ
ಶ್ರೀರಂಗರಂಗನನೆ ತನ್ನವನನ್ನಾಗಿಸಿಕೊಂಡ ಶ್ರೀವೈಷ್ಣವ ಕುಲ ಕಲ್ಪವಲ್ಲಿ
ಗಂಧವತೀ ಪೃಥ್ವಿ ಮಾತೆ ಗೋದೆಯಡಿದಾವರೆಗಳಲಿ ಶಿರಬಾಗಿ
ನೀ ನನುದಿನವು ನಮಿಸಿ ಹಾಡುತ್ತ ಪಾಡುತ್ತ ಧನ್ಯವಾಗೆನ್ನ ಮನವೇ.

(೩)

*ಶೂಡಿಕೊಡುತ್ತ ಶುಡರ್‌ಕೊಡಿಯೇ ತೊಲ್‌ಪಾವೈ*
*ಪಾಡಿ ಯರುಳವಲ್ಲ ಪಲ್ವಳೈಯಾಯ್‌ನಾಡಿನೀ*
*ವೇಂಗಡರ್ಕು ಎನ್ನೈ ವಿಧಿ ಎನ್ನವಿಮ್ಮಾತ್ತಂ*
*ನಾನ್ ಕಡವಾ ವಣ್ಣಮೇ ನಲ್ಗು*

-ಶ್ರೀ ಪುಂಡರೀಕಾಕ್ಷರು.

**ಭಾವಾನುವಾದ:**

ಮುಡಿದ ಹೂಮಾಲೆಯನಿತ್ತು ಶ್ರೀರಂಗರಂಗನನೆ ಮೆಚ್ಚಿಸಿದ ಸಿರಿದೇವಿ
ಸಿರಿವಿಲ್ಲಿಪುತ್ತೂರು ಕಲ್ಪವಲ್ಲಿ ಆರೈದು ವೇದ ಗೀತೆಗಳ ಪಾಡುತಾಡುತೆಲ್ಲರನು
ಪೊರೆವ ಮಾತೆಯೆ ಪಾಲ್ಗಡಲ ಸಿರಿನಿಧಿಯೆ ಯತಿರಾಜ ಸೋದರಿಯೆ
ತಿರುವೇಂಕಟೇಶನಿಗೆನ್ನ ಧಾರೆಯೆರೆಯಿರೆಂದತಿಶಯದಿ ಪಿತನಿಗರುಹಿದಾ ನಿನ್ನ
ನಲ್ನುಡಿಯ ನಾವನುದಿನವು ಪಾಡುವಂತೆಮ್ಮ ಮನವನನುಗೊಳಿಸಿ
ನಂದನಂದನನ ಅರಮನೆಗೈವಂತೆಮ್ಮ ಹರಸೆಂದು ನಿನ್ನರವಿಂದ ಪಾದದ್ವಯದಿ
ಶರಣೆಂದೆವಮ್ಮ

## ಮಂಗಳ ಪದ್ಯಗಳು

*ಶ್ರೀ ವಿಷ್ಣುಚಿತ್ತ ಕುಲನಂದನ ಕಲ್ಪವಲ್ಲೀಂ*
*ಶ್ರೀರಂಗರಾಜ ಹರಿಚಂದನ ಯೋಗದೃಷ್ಯಾಂ*
*ಸಾಕ್ಷಾತ್ ಕ್ಷಮಾಂ ಕರುಣಯಾ ಕಮಲಾಮಿವಾಸ್ಯಾಂ*
*ಗೋದಾಮನನ್ಯ ಶರಣಂ ಶರಣಂ ಪ್ರಪದ್ಯೇ*

-ಗೋದಾಸ್ತುತಿ

ವೇಯರ್ ಪುಕಳ್‌ವಿಲ್ಲಿಪುತ್ತೂರ್ ಆಡಿಪ್ಪೂರಂ
ಮೇಲ್‌ಮೇಲುಂ ಮಿಕವಿಳಂಗ ವಿಟ್ಟುಚಿತ್ತನ್
ತೂಯ ತಿರುಮಗಳಾಯ್ ವಂದು ಅರಂಗನಾರ್ಕ್ಕು
ತುಳೈಯ್ ಮಾಲೈ ಮುಡಿಶೂಡಿಕೊಡುತ್ತಮಾದೇ
ನೇಯ್ ಮುಡನ್ ತಿರುಪ್ಪಾವೈ ಪಾಟ್ಪಾರೈಂದುಂ
ನಿಯುರೈತ್ತ ತೈಯೊರುತಿಂಗಳ್ ಪಾಮಾಲೈ
ಯಾಯ ಮಕಳಿನೂರುಡನ್ ನಾನ್ಪತ್ತುಮೂನ್ರುಂ
ಅನ್ಬುಡನೇ ಯಡಿನೇನುಕ್ಕು ಯರುಳ್‌ಶೇಯನಿಯೇ

-ಪ್ರಬಂಧಸಾರ

*ಇನ್ರೋ ತಿರುವಾಡಿಪ್ಪೂರಂ ಎಮಕ್ಕಾಗ*
*ವನ್ರೋ ಇಂಗಾಡಾಳವರಿತ್ತಾಳ್‌ಕುನ್ರಾದ*
*ವಾಳಿವಾನ ವೈಕುಂದವಾನ್ ಪೋಕಂ ತನ್ನೈಕಳಂದು*
*ಆಳವಾರ್ ತಿರುಮಕಳಾರಾಯ್*

-ಉಪದೇಶ ರತ್ನಮಾಲೈ.

# ತನಿಯನ್‌ಗಳು

ಗುರುಮುಖಮನಧೀತ್ಯ ಪ್ರಾಹ ವೇದಾನ್ ಅಶೇಷಾನ್
ನರಪತಿ ಪರಿಕ್ಲ್ಪ್ರಪ್ತಂ ಶುಲ್ಕಮಾದಾತುಕಾಮಃ
ಶ್ವಶುರಮಮರವಂದ್ಯಂ ರಂಗನಾಥಸ್ಯ ಸಾಕ್ಷಾತ್
ದ್ವಿಜಕುಲತಿಲಕಂ ತಂ ವಿಷ್ಣುಚಿತ್ತಂ ನಮಾಮಿ

ಮಿನ್ನಾರ್ ತಡಮದಿಳ್ ಶೂಳ್ ವಿಲ್ಲಿಪುತ್ತೂರ್ ಎನ್ರೊರುಕಾಲ್
ಶೊನ್ನಾರ್ ಕಳರ್ಕಮಲಂ ಶೂಡಿನೋಂ-ಮುನ್ನಾಳ್
ಕಿಳಿಯರುತ್ತಾನ್ ಎನ್ರುರೈತ್ತೋಂ ಕೀಳ್ಮೈಯಿನಿಲ್‌ಶೇರುಂ
ವಳಿಯರುತ್ತೋಂ ನೆಂಜಮೇ ವಂದು.

ಪಾಂಡಿಯನ್ ಕೊಂಡಾಡ ಪ್ಪಟ್ಟರ್ ಪಿರಾನ್ ವಂದಾನ್ ಎನ್ರು
ಈಂಡಿಯ ಶಂಗಮ್ ಎಡುತ್ತೊದ-ವೇಂಡಿಯ
ವೇದಂಗಳೋದಿ ವಿರೈಂದು ಕಿಳಿಯರುತ್ತಾನ್
ಪಾದಂಗಳ್ ಯಾಮುಡೈಯ ಪತ್ತು.

# ತಿರುಪ್ಪಲ್ಲಾಂಡು

ಪಲ್ಲಾಂಡು ಪಲ್ಲಾಂಡು ಪಲ್ಲಾಯಿರತ್ತಾಂಡು
ಪಲಕೋಟಿ ನಾರಾಯಿರಂ
ಮಲ್ಲಾಂಡ ತಿಂಡೋಳ್ ಮಣಿವಣ್ಣಾವುನ್
ಶೆವ್ವಡಿ ಶೆವ್ವಿ ತಿರುಕ್ಕಾಪ್ಪು.

ಅಡಿಯೋವೋಡುಂ ನಿನ್ನೋಡುಂ ಪಿರಿವಿನ್ರಿ ಯಾಯಿರಂ ಪಲ್ಲಾಂಡು
ವಡಿವಾಯ್ ನಿನ್ ವಲಮಾರ್ಪಿನಿಲ್ ವಾಳ್ಗಿನ್ರ ಮಂಗೈಯಂ ಪಲ್ಲಾಂಡು
ವಡಿವಾರ್ ಶೋದಿವಲತ್ತುರ್ರೈಯಂ ಶುಡರಾಳಿಯುಂ ಪಲ್ಲಾಂಡು
ಪಡೈಪ್ಪೋರ್ಪುಕ್ಕು ಮುಳಂಗುಮಪ್ಪಾಂಚಶನ್ನಿಯಮುಂ ಪಲ್ಲಾಂಡೇ.

ವಾಳಾಳ್‌ಪಟ್ಟು ನಿನ್ರೀರ್‌ಉಳ್ಳೀರೇಲ್ ವಂದು ಮಣ್ಣುಂಮಣಮುಂ ಕೊಣ್ಮಿನ್
ಕೂಳ್‌ಆಳ್‌ಪಟ್ಟು ನಿನ್ರೀರ್ಹಳ್ಳೈ ಎಂಗಳ್ ಕುಳುವಿನಿಲ್ ಪುಹುದಲೊಟ್ಟೋ
ಏಳಾಟ್ಕಾಲಂ ಪಳಿಪ್ಪಿಲೋಂ ನಾಂಗಳ್ ಇರಾಕ್ಕದರ್ ವಾಳ್ ಇಲಂಗೈ
ಪಾಳ್‌ಆಳ್‌ಆಹ ಪ್ಪಡೈ ಪೊರುದಾನುಕ್ಕು ಪ್ಪಲ್ಲಾಂಡು ಕೂರುದುಮೇ

ಏಡು ನಿಲತ್ತಿಲ್ ಇಡುವ ತನ್‌ಮುನ್ನಂ ವಂದೆಂಗಳ್ ಕುಳಾಂ ಪುಹುನ್ದು
ಕೂಡುಮನಮುಡೈಯೀರ್ಹಳ್ ವರಂಪೊಳಿವಂದೊಲ್ಲೈಕ್ಕೂಡುಮಿನೋ
ನಾಡು ನಗರಮು ನನ್ಗರಿಯ ನಮೋ ನಾರಾಯಣಾಯವೆನ್ರು
ಪಾಡುಮನಮುಡೈಪ್ಪತ್ತರುಳ್ಳೀರ್ ವಂದು ಪಲ್ಲಾಂಡು ಕೂರುಮಿನೇ

ಅಂಡಕ್ಕುಲತ್ತುಕ್ಕದಿಪತಿಯಾಹಿ ಯಶುರರ್ ಇರಾಕ್ಕದರೈ
ಯಿಂಡಕ್ಕುಲತ್ತೈಯೆಡುತ್ತುಕ್ಕಳೈನ್ದ ವಿರುಡೀಕೇಶನ್ರನಕ್ಕು
ತೊಂಡಕ್ಕುಲತ್ತಿಲುಳ್ಳೀರ್ ವಂದಡಿತೊಳುದಾಯಿರನಾಮಂ ಶೊಲ್ಲಿ
ಪ್ಪಂಡೈಕುಲತ್ತೈ ತ್ತವಿರ್‌ನ್ದು ಪಲ್ಲಾಂಡು ಪಲ್ಲಾಯಿರತ್ತಾಂಡೆನ್ಮಿನ್ನೇ

ಎಂದೈ ತಂದೈ ತಂದೈ ತಂದೈ ತಮ್ಮೂತ್ತಪ್ಪನ್ ಏಳ್‌ಪಡಿಕಾಲ್ ತೊಡಂಗಿ
ವಂದು ವಳಿವಳಿಯಾಟ್ಚೆಯ್ಗಿನ್ರೋಮ್ ತಿರುವೋಣತ್ತಿರುವಿಳವಿಲ್
ಅಂದಿಯಂ ಪೋದಿಲ್ ಅರಿಯರುವಾಹಿ ಅರಿಯೈ ಯಳಿತ್ತವನ್ನೈ
ಪ್ಪಂದನೈ ತೀರ ಪ್ಪಲ್ಲಾಂಡು ಪಲ್ಲಾಯಿರತ್ತಾಂಡೆನ್ರು ಪಾಡುದುಮೇ

ತೀಯಿಪ್ಪೊಲಿಹಿನ್ರ ಶೆಂಜುಡರಾಳಿತ್ತಿಹಳ್ ತಿರುಚ್ಚಕ್ಕರತ್ತಿನ್
ಕೋಯಿಪ್ಪೊರಿಯಾಲೇ ಯೊತ್ತುಂಡು ನಿನ್ರು ಕುಡಿಕುಡಿಯಾಟ್ಚೆಯ್ಗಿನ್ರೋಂ
ಮಾಯಪ್ಪೊರುಪಡೈವಾಣನ್ನೈ ಯಾಯಿರಂದೋಳುಂ ಪೊಳಿಕುರುದಿ
ಪಾಯಚ್ಚುಳತ್ತಿಯ ವಾಳಿವಲ್ಲಾನುಕ್ಕುಪ್ಪಲ್ಲಾಂಡು ಕೂರುದುಮೇ

ನೆಯ್ಯಿಡೈ ನಲ್ಲದೋರ್ ಶೋರುಂ ನಿಯತಮುಮತ್ತಾಣೆಚ್ಚೆವಹಮುಂ
ಕೈಯಡೈಕ್ಕಾಯುಂ ಕಳುತ್ತುಕ್ಕು ಪ್ಪೂಣೊಡು ಕಾದುಕ್ಕುಕ್ಕುಂಡಲಮುಂ
ಮೆಯ್ಯಿಡ ನಲ್ಲದೋರ್ ಶಾಂದಮುಂ ತಂದೆನ್ನೈ ವೆಳ್ಳುಯಿರಾಕ್ಕವಲ್ಲ
ಪೈಯುಡೈ ನಾಹಪ್ಪಹೈ ಕ್ಕೊಡಿಯಾನುಕ್ಕು ಪ್ಪಲಾಂಡು ಕೂರುವನೇ

ಉಡುತ್ತು ಕ್ಕಳೈಂದ ನಿನ್‌ಪೀತಹವಾಡೈ ಯುಡುತ್ತು ಕ್ಕಲತ್ತದುಂಡು
ತೊಡುತ್ತ ತುಳಾಯ್ಮಲರ್ ಶೂಡಿಕ್ಕಳೈಂದನ ಶೂಡುಮಿತ್ತೊಂಡರ್ಹಳೋಂ
ವಿಡುತ್ತ ದಿಶೈಕ್ಕರುಮಂ ತಿರುತ್ತಿತ್ತಿರುವೋಣತ್ತಿರುವಿಳವಿಲ್
ಪಡುತ್ತ ಪೈನ್ನಾಹಣೈಪ್ಪಳ್ಳಿಕೊಂಡಾನುಕ್ಕು ಪ್ಪಲ್ಲಾಂಡು ಕೂರುದುಮೇ

ಎನ್ನಾಳ್ ಎಂಬೆರುಮಾನ್ ಉನ್ರನಕ್ಕಡಿಯೋಮ್ ಎನ್ರೆಳುತ್ತಪ್ಪಟ್ಟ
ವನ್ನಾಳೇ ಯಡಿಯೋಂಗಳ್ ಅಡಿಕ್ಕುಡಿಲ್ ವೀಡು ಪೆತ್ತುಯ್ಯಂದು ಕಾಣ್
ಶೆನ್ನಾಡೋತ್ತಿ ತ್ತಿರುಮದುರೈಯುಳ್ ಶಿಲೈ ಕುನಿತ್ತೈಂದಲೈಯ
ಪೈನ್ನಾಹತ್ತಲೈಪ್ಪಾಯ್‌ನ್ದವನೇ ಯುನ್ನೈಪ್ಪಲ್ಲಾಂಡು ಕೂರುದುಮೇ

ಅಲ್‌ವಳಕ್ಕೊನ್ರುಮಿಲ್ಲಾವಣಿ ಕೋಟ್ಟಿಯರ್‌ಕೋನ್ ಅಭಿಮಾನ ತುಂಗನ್
ಶೆಲ್ವನೈಪ್ಪೋಲ ತ್ತಿರುಮಾಲೇ ನಾನುಮುನಕ್ಕುಪ್ಪಳವಡಿಯೇನ್
ನಲ್‌ವಹೈಯಾಲ್ ನಮೋನಾರಾಯಣಾವೆನ್ರು ನಾಮಂ ಪಲ ಪರವಿ
ಪ್ಪಲ್ ವಹೈಯಾಲುಂ ಪವಿತ್ತಿರನೇ ಯುನ್ನೈಪ್ಪಲ್ಲಾಂಡು ಕೂರುವನೇ

ಪಲ್ಲಾಂಡೆನ್ರು ಪವಿತ್ತಿರನೈ ಪರಮೇಟ್ಟಿಯೈ ಚ್ಚಾರ್ಙ್ಗಮೆನ್ನುಂ
ವಿಲ್ಲ್ ಆಂಡಾನ್ ತನ್ನೈ ವಿಲ್ಲಿಪುತ್ತೂರ್ ವಿಟ್ಟುಚಿತ್ತನ್ ವಿರುಂಬಿಯ ಶೊಲ
ನಲ್ಲಾಂಡೆನ್ರು ನವಿನ್ರುರೈಪ್ಪಾರ್ ನಮೋನಾರಾಯಣಾಯವೆನ್ರು
ಪಲ್ಲಾಂಡು ಪರಮಾತ್ಮನೈ ಚ್ಚೂಳ್‌ನ್ದ್ ಇರುನ್ದೇತ್ತುವರ್ ಪಲ್ಲಾಂಡೇ

॥ ಶ್ರೀಮತೇ ರಾಮಾನುಜಾಯ ನಮಃ ॥



## ಶ್ರೀ ಗೋದಾದೇವಿ ಅನುಗ್ರಹಿಸಿದ

# ತಿರುಪ್ಪಾವೈ ಗೀತಮಾಲೆ







ಕರಾರವಿಂದೇನ ಪದಾರವಿಂದಂ
ಮುಖಾರವಿಂದೇ ವಿನಿವೇಶಯಂತಂ
ವಟಸ್ಯ ಪತ್ರಸ್ಯ ಪುಟೇಶಯಾನಂ
ಬಾಲಂ ಮುಕುಂದಂ ಮನಸಾ ಸ್ಮರಾಮಿ



## ಪಾಶುರ - ೧

ಮಾರ್ಗಳಿತ್ತಿಂಗಳ್ ಮದಿನಿರೈಂದ ನನ್ನಾಳಾಲ್
ನೀರಾಡಪ್ಪೋದುವೀರ್ ಪೋದುಮಿನೋ ನೇರಿಳೈಯೀರ್
ಶೀರ್‌ಮಲ್ಗು ಮಾಯ್‌ಪ್ಪಾಡಿ ಶೆಲ್ವಚ್ಚಿರುಮೀರ್‌ಕಾಳ್,
ಕೂರ್ವೇಲ್ ಕೊಡುಂ ತೊಳಿಲನ್ ನನ್ದಗೋಪನ್
ಕುಮರನ್
ಎರಾರ್‌ನ್ದ ಕಣ್ಣಿ ಯಶೊದೈ ಯಿಳಂ ಶಿಂಗಂ
ಕಾರ್‌ಮೇನಿಚ್ಚೆಂಗಣ್ ಕದಿರ್‌ಮದಿಯಮ್ಬೋಲ್ ಮುಕತ್ತಾನ್
ನಾರಾಯಣನೇ ನಮಕ್ಕೇ ಪರೈ ತರುವಾನ್
ಪಾರೋರ್ ಪುಕ್ಕಳಿಪ್ಪಡಿನ್ದೇಲೋರೆಂಬಾವಾಯ್

## ಭಾವಾನುವಾದ - ೧

*ತ್ವರೆಮಾಡಿ ಬನ್ನಿ ತ್ವರೆಮಾಡಿ ಬನ್ನಿರೆನ್ನೊಲವ ಗೆಳತಿಯರೇ*
*ಮಾರ್ಗಶಿರನೋಂಪಿಯಿಂ ಮುಕ್ತಿ ಸಾಮ್ರಾಜ್ಯವನೆ ಬಯಸುವಾ ಬನ್ನಿ* *// ಪ //*

ಮಾರ್ಗಶಿರದುದಯದಲಿ ಯಮುನೆಯೊಳ್ಮಿಂದು ಸಂತಸದಿ
ಬಿಂದು ಮಾಧವನ ಭಜಿಸಿ ನೋಂಪಿಯಿಂ ಪಾಡುತಾಡುವ ಬನ್ನಿ
ಬನ್ನಿರೆನ್ನೆಲ್ಲ ಒಲವ ಗೆಳತಿಯರೇ ಮೋಕ್ಷ ಕಾಮಿಗಳಾಗುವ ಬನ್ನಿ
ಶತಕೋಟಿ ರವಿಚಂದ್ರ ನಯನ ವದನಾರವಿಂದ ವಿಶ್ವದಕ್ಷಿಣನು
ಗೋವಿಂದ ಗೋಪಾಲ ಮುಕ್ತಿಯಮುನೆಯ ತಟದಲ್ಲಿಹನು
ನೋಂಪಿಯಿಂ ಶರಣಾಗಿ ಬನ್ನಿರೆಂದೆನುತ ವೇಣುನಾದದಿ ಕರೆದಿಹನು
ಒಲಿದು ವರವೀವೆನೆಂದಿಹನು ಶಿಷ್ಟೇಷ್ಟ ನಂದಯಶೋದಾಕಂದ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮುಂಗಳದ
ಮುಂಬೆಳಕು.





## ಪಾಶುರ - 1

**ಸಂಕ್ಷಿಪ್ತ ಭಾವಾರ್ಥ**

ಮಂಗಳ ಕಾರ್ಯಗಳನ್ನು ಮಂಗಳಕರ ಕಾಲದಲ್ಲಿ ಪ್ರಾರಂಭಿಸಬೇಕು. ಅಂತೆಯೇ ಈ ಮಾರ್ಗಶಿರ ಮಾಸವು ದೇವತೆಗಳಿಗೆ ಉಷಃಕಾಲವಾದ್ದರಿಂದ, ಸಕಲರಿಗೂ ಮಂಗಳವನ್ನುಂಟುಮಾಡುವ ಕಾಲ. ಈ ಕಾಲದಲ್ಲಿ ಮುಕ್ಕೋಟಿ ದೇವತೆಗಳೂ ಚೈತನ್ಯದ ಚಿಲುಮೆಗಳಾಗಿ ವಟಪತ್ರಶಾಯಿಯಾದ ದೇವಕೀತನಯನನ್ನು ಸ್ತುತಿಸುತ್ತಾ ಆ ಪರಂಧಾಮನ ಕೃಪಾಕಟಾಕ್ಷಕ್ಕಾಗಿ ಎದುರುನೋಡುವ ಕಾಲ ಆದ್ದರಿಂದ ಎಲೈ ಸಖಿಯರೇ, ನಾವೂ ಸಹ ಬ್ರಾಹ್ಮೀ ಕಾಲದಲ್ಲಿ ಎದ್ದು ಯಮುನಾ ನದಿಯಲ್ಲಿ ಸ್ನಾನ ಮಾಡಿ ಭಕ್ತಿ ಜಲಧಿಯಲ್ಲಿ ಮಿಂದು ಶ್ರೀ ಹರಿಯನ್ನು ಧ್ಯಾನಿಸಿ ಪೂಜಿಸಿ ಪುನೀತರಾಗೋಣ. ಇದರಿಂದ ಆ ದೇವತೆಗಳೂ ಪ್ರಸನ್ನರಾಗುತ್ತಾರೆ. ದೇವದೇವನೂ ಸಹ ಪ್ರಸನ್ನನಾಗಿ ವರಗಳನ್ನು ನೀಡುತ್ತಾನೆ. ನಮಗೆ ಮುಕ್ತಿಮಾರ್ಗಪ್ರದವಾದ ವಿದ್ಯೆಯನ್ನು ಅನುಗ್ರಹಿಸುತ್ತಾನೆ.

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।

ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥

ಎಂದು ಗೀತಾಚಾರ್ಯನಾಗಿ ಲೋಕಕ್ಕೆ ಸಾರಿ ಸಾರಿ ಹೇಳಿದ್ದಾನೆ. ದುಷ್ಟರನ್ನು ಶಿಕ್ಷಿಸಿ, ಶಿಷ್ಟರ ರಕ್ಷಣೆಗಾಗಿಯೇ ತಾಯಿ ಯಶೋಧೆಯ ಸಿಂಹದಂತಹ ಮಗನಾಗಿ ಇಳೆಗಿಳಿದು ಬಂದಿದ್ದಾನೆ, ಶ್ರೀ ಕೃಷ್ಣ.

ಅರವಿಂದ ನಯನನನ್ನು ಪಾಡಿ ಪೊಗಳಿ ಧ್ಯಾನಿಸಿದರೆ ನಮ್ಮಲ್ಲಿರುವ ಅಸುರೀ ಶಕ್ತಿಗಳಾದ ಅರಿಷಡ್ವರ್ಗಗಳನ್ನು ನಾಶ ಮಾಡಿ ಮುಕ್ತಿಮಾರ್ಗವನ್ನು ತೋರಿಸುತ್ತಾನೆ.

ಆದ್ದರಿಂದ ಓ ನನ್ನೆಲ್ಲ ಒಲವ ಗೆಳತಿಯರೇ ಬೇಗೆದ್ದು ಬನ್ನಿ. ನೀವು ಮುಗ್ಧಾತ್ಮರು, ವಸುಂಧರೆಯ ಮುದ್ದು ಕುವರಿಯರು. ನಮಗೆ ಶ್ರೀ ಹರಿಯ ದರ್ಶನವಾಗಬೇಕಾದರೆ, ಬೇಗೆದ್ದು ಬನ್ನಿ ಇದುವೇ ಸಕಾಲ.

ಕಾಲ ಮಿಂಚುವ ಮುನ್ನವೇ ನಾವು ಆ ಅಪ್ರಮೇಯನನ್ನು ಒಲಿಸಿಕೊಳ್ಳಬೇಕು. ಇದರಿಂದ ಸಮಸ್ತ ಲೋಕಕ್ಕೂ ಕಲ್ಯಾಣವುಂಟಾಗಲೀ.





## ಪಾಶುರ-೨

ವೈಯತ್ತುವಾಳ್‌ವೀರ್‌ಕಾಳ್ ನಾಮುಂ ನಂ ಪಾವೈಕ್ಕು
ಶೈಯ್ಯುಂ ಕಿರಿಶೈಗಳ್ ಕೇಳಿರೋ ಪಾರ್ಕಡಲುಳ್
ಪೈಯ್ಯತ್ತುಯಿನ್ರ ಪರಮನಡಿ ಪಾಡಿ
ನೆಯ್ಯುಣ್ಣೋಂ ಪಾಲುಣ್ಣೋಂ ನಾಟ್ಕಾಲೇ ನೀರಾಡಿ
ಮೈಯ್ಯುಟ್ಟೆಳುದೋಂ ಮಲರಿಟ್ಟು ನಾ ಮುಡಿಯೋಂ
ಶೈಯ್ಯಾದನ ಶೆಂಯ್ಯೋಂ ತೀಕ್ಕುರಳೈ ಶೆನ್ರೋದೋಂ
ಐಯ್ಯುಮುಂ ಪಿಚ್ಚೆಯುಮಾಂದನೈಯುಂ ಕೈಕಾಟ್ಟಿ
ಉಯ್ಯುಮಾರೆಣ್ಣಿಯುಕಂದೇಲೋರೆಂಬವಾಯ್

**ಭಾವಾನುವಾದ - ೨**

*ಕೇಳಿರೆನ್ನೋಲವ ಮಾತೊಂದ ಓ ನನ್ನ ಗೆಳತಿಯರೇ*
*ಕೇಳಿರೆನ್ನೋಲವ ಮಾತೊಂದ ತ್ವರೆಮಾಡಿ ಬನ್ನಿ ತ್ವರೆಮಾಡಿಬನ್ನೀ* *॥ಪ॥*

ಅರಿತಾಚರಿಸಿ ನೋಂಪಿಯ ಭಕ್ತಿ ಯಮುನೆಯೊಳ್ಮಿಂದು
ವಿಮಲ ಚರಿತರೆ ವಿಶ್ವವಂದ್ಯರೆ ಭಾರತೀಯ ಮುದ್ದು ಕುವರಿಯರೇ
ಬನ್ನಿ ಭಾಗವತರ ಸಿರಿಪಾದದಲ್ಲಿ ಪೊಡಮುಡುವ ಶಿರಭಾಗಿ
ಭಕ್ತಿರಸ ಪಾನದಿಂ ಮುದದಿ ನುತಿಸೋಣ ಭವದಾಸೆಗಳ ಬದಿಗಿಟ್ಟು
ಪಾಲ್ತೊಸ್ಪರು ಬೆಣ್ಣೆ ಬಯಕೆಯನೆ ಕಳೆದು ನರಹರಿಯ ನುತಿಸೋಣ
ಸರಸಜೋದ್ಭವ ಪಿತನ ಸಿರಿಪಾದದಲ್ಲಿ ಶರಣಾಗಿ ಅನ್ಯಥಾ ಶರಣಂ ನಾಸ್ತಿ
ನೀನೇ ಮುಕ್ತಿ ಎಂದೆನಲು ವರಾಹ ವಾಮನ ತಾನೊಲಿವ ತಪ್ಪದೆಲೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ
ಮುಂಬೆಳಕು.





## ಪಾಶುರ - 2

### ಸಂಕ್ಷಿಪ್ತ ಭಾವಾರ್ಥ

ಸಕಲ ಸದ್ಗುಣ ಶೀಲ, ಚರಾಚರಗಳಿಗೆ ಜನಕ ಜನನಿ ಇಂತಹ ಅನಂತಪದ್ಮನಾಭನನ್ನು ಒಲಿಸಿಕೊಳ್ಳಬೇಕಾದಲ್ಲಿ ನಾವು ನಿಯಮಗಳನ್ನು ಅರಿತು ವ್ರತವನ್ನಾಚರಿಸಬೇಕು. ಶ್ರೀ ಹರಿಯೂ ಸಹ ನಮ್ಮೊಡನಾಡಲು ನಮ್ಮ ಆನಂದದಲ್ಲಿ ಭಾಗಿಯಾಗಲು ಕಾತುರನಾಗಿದ್ದಾನೆ. ಆತನೊಡನಾಡುವುದೇ ನಮ್ಮ ಜನ್ಮ ಸಾರ್ಥಕ್ಯ. ಈ ಆನಂದವು ನಮಗೆ ಕೋಟಿ ಕೋಟಿ ಜನ್ಮಗಳ ಪುಣ್ಯಫಲ. ಆದ್ದರಿಂದ ಬನ್ನಿ, ಆ ಪರಮಾತ್ಮನನ್ನು ಒಲಿಸಿಕೊಳ್ಳಲು ನಮ್ಮ ನಮ್ಮ ಮನಸ್ಸೇಂದ್ರಿಯಗಳನ್ನು ಪರಿಪಕ್ವವಾಗಿಸಿಕೊಳ್ಳೋಣ. ಭಕ್ತಿಯಮುನೆಯೊಳ್ಮಿಂದು ಮಡಿಯುಟ್ಟು ಗುರುಹಿರಿಯರಿಗೆ ಸಾಧುಸಜ್ಜನರಿಗೆ ನಮಸ್ಕರಿಸೋಣ, ದೇಹ ಪೋಷಣೆಯತ್ತ ನಮ್ಮ ಗಮನ ಹರಿಯದಿರಲಿ. ಹಾಲು, ಮೊಸರು, ಬೆಣ್ಣೆ, ತುಪ್ಪ ಇತ್ಯಾದಿಗಳಾವುವನ್ನೂ ಅಪೇಕ್ಷಿಸದೇ ಕೇವಲ ನಿರ್ಮಲಾಂತಃಕರಣದಿಂದ ಶ್ರೀ ಹರಿಯನ್ನು ಧ್ಯಾನಿಸೋಣ. ದಾನ ಧರ್ಮಗಳನ್ನು ಮಾಡೋಣ, ತಾನು ಸೃಷ್ಟಿಸಿದ್ದನ್ನು ಯಾರು ಪ್ರೀತಿಸುತ್ತಾರೋ ಅಂತಹವರನ್ನು ನಾರಾಯಣನು ಮೆಚ್ಚಿಕೊಳ್ಳುತ್ತಾನೆ.

'ದೇವ ಸ್ವಾಮಿನ್ ಜಗನ್ನಾಥ ಶ್ರೀಯಾಭೂಮ್ಯಾಚ ನೀಳಯಾ ಜಾಗರ್ತ್ಯಾಯೋಗನಿದ್ರಾಮುಪಾಶ್ರಯ' ಎಂದು ಪ್ರಾರ್ಥಿಸೋಣ. 'ಕೌಸಲ್ಯಾ ಸುಪ್ರಜಾ ರಾಮಾ ಪೂರ್ವಾಸಂಧ್ಯಾ ಪ್ರವರ್ತತೇ ಉತ್ತಿಷ್ಟ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ' ಎಂದು ಪ್ರಾರ್ಥಿಸೋಣ. 'ಉತ್ತಿಷ್ಟೋತ್ತಿಷ್ಟ ಗೋವಿಂದ ಉತ್ತಿಷ್ಟ ಗರುಡಧ್ವಜ ಉತ್ತಿಷ್ಟ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು' ಎಂದು ಪ್ರಾರ್ಥಿಸೋಣ. ಆಗ ವಟಪತ್ರಶಾಯಿಯಾದ ಯಶೋಧಾನಂದನನು ನಮ್ಮ ಪ್ರಾರ್ಥನೆಯನ್ನು ಕೇಳಿಸಿಕೊಳ್ಳುತ್ತಾನೆ. 'ಭಕ್ತರಕ್ಷಣೆಯ ವ್ರತಧಾರಿ ನಮ್ಮ ಯದುಕುಲನಂದನ, ಭಕ್ತರಕ್ಷಣೆಯ ಕಾಲ ಒದಗಿ ಬಂದಿದೆ, ನಮ್ಮಲ್ಲಿರುವ ಮನೋದೌರ್ಬಲ್ಯಗಳನ್ನು ಹೋಗಲಾಡಿಸು, ರಕ್ಷಿಸು, ಪಾಹಿ ಮಾಂ ಜನಾರ್ಧನ ಪಾಹಿ ಮಾಂ ಜಾನಕೀ ರಮಣ' ಎಂದು ಪ್ರಾರ್ಥಿಸೋಣ. ಆಗ ಸುಧಾಮ ಹೃತ್ಕಮಲವಾಸಿಯಾದ ರುಕ್ಮಿಣೀವಲ್ಲಭನು ತನಗಾಗಿ, ತನ್ನ ದರ್ಶನಕ್ಕಾಗಿ ಎಷ್ಟೆಲ್ಲಾ ಪರಿತಪಿಸುತ್ತಿದ್ದಾರೆ ಎಂದು ಮನಕರಗಿ ಗರುಡ ಗಮನನಾಗಿ ಓಡೋಡಿ ಬಂದು ರಕ್ಷಿಸುತ್ತಾನೆ. ಆದ್ದರಿಂದ ಬೇಗೆದ್ದು ಬನ್ನಿ ನನ್ನ ಒಲವ ಗೆಳತಿಯರೆ. ನೀವು ಸಾಮಾನ್ಯರಂತಲ್ಲ. ನೀವು ವೇದಜನನಿಯ ಮಕ್ಕಳು. ವಿಶ್ವವಂದ್ಯರಿಗೆ ಜನ್ಮವಿತ್ತವರ ಮಕ್ಕಳು. ವಿಶ್ವವಂದ್ಯರು. ಇಂದು ನಮ್ಮತನವನ್ನು ನಾವು ಉಳಿಸಿಕೊಳ್ಳಬೇಕಾಗಿದೆ. ಆದ್ದರಿಂದ ಎಚ್ಚರಾಗಿ ಬನ್ನಿ. ನಿಯಮದಿಂದ ವ್ರತವನ್ನು ಆಚರಿಸೋಣ.

ಆತ್ಮೋನ್ನತಿಯ ಜೊತೆಗೆ ಜಗತ್ಕಲ್ಯಾಣವೂ ಸಹ ಆಗುತ್ತದೆ.





## ಪಾಶುರ-೩

ಓಂಗಿ ಉಲಹಳಂದ ವುತ್ತಮನ್ ಪೇರ್ ಪಾಡಿ
ನಾಂಗಳ್ ನಮ್‌ಪಾವೈಕ್ಕುಶಾತ್ತಿ ನೀರಾಡಿನಾಲ್
ತೀಂಗಿನ್ರಿ ನಾಡೆಲ್ಲಾಂ ತಿಂಗಳ್ ಮುಮ್ಮಾರಿ ಪೆಯ್ದು
ಓಂಗು ಪೆರುಂ ಶೆನ್ನಲೂಡುಕಯಲುಹಳ
ಪೊಂಕುವಲ್ಲೈಪೋದಿಲ್ ಪೊರಿವಂಡು ಕಣ್ಪಡುಪ್ಪ
ತೇಂಗಾದೇ ಪುಕಿರುಂದು ಶೀರ್ತ್ತ ಮುಲೈಪತ್ತಿ
ವಾಂಗ, ಕುಡಂ ನಿರೈಕ್ಕುಂ ವಳರ್ ಪೆರುಂ ಪಶುಕ್ಕಳ್
ನೀಂಗಾದ ಶೆಲ್ವಂ ನಿರೈಂದೇಲೋರೆಂಬಾವಾಯ್

**ಭಾವಾನುವಾದ - ೩**

*ಕೇಳಿರೇ ಕೇಳಿರೇ ಎನ್ನೊಲವ ಸಖಿಯರೇ ಕೇಳಿರೇ*
*ನಮ್ಮ ಮಹಿಮನಾ ಮಹಿಮಾತಿಶಯಗಳನು ಕೇಳಿರೇ* *॥ಪ॥*

ತ್ರಿವಿಕ್ರಮನಿವನು ಸುರಾಸುರ ವಂದಿತ ಚರಣ ವಿಶ್ವಬಾಹುವು
ತಾನೊಲಿದು ವರವೀವ ನಮ್ಮನೋಂಪಿಗೆ ಮನಕರಗಿ ವಿಶ್ವಾತ್ಮ
ಕಳೆವುದೆಲ್ಲವೀ ಧರೆಯ ಬಂಧನ ನಶಿಸುವುವು ದುರಿತರಾಶಿಗಳೆಲ್ಲ
ಹಸಿರ ಸಿರಿಯಲ್ಲಿ ನಲಿಯೆ ಮರಿಮೀನು ಜಲಚರವಾನಂದದಲಿ
ತುಂಬಿ ಧನಧಾನ್ಯ ಸಂಪದ ನಲಿವಳೆನ್ನಮ್ಮ ಭಾರತೀಯು
ದುಂಬಿಗಳಿಂಚರದ ಮಧುರ ನಾದಮೋಂಕಾರನಾದ ತಾನಾಗಿ
ಸುರಭಿಗಳತಿಶಯದಿ ಹರಿಸುವುವು ಕ್ಷೀರಧಾರೆ ಧಾರೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು.





## ಪಾಶುರ - 3

### ಸಂಕ್ಷಿಪ್ತ ಭಾವಾರ್ಥ

ಈ ಮಾರ್ಗಶಿರ ವ್ರತವನ್ನು ಆಚರಿಸಿದರ ದೊರಕುವ ಫಲಗಳೇನು ಗೊತ್ತೆ ? ಓಂಗಿ ಉಲಗಳಂದ ಉತ್ತಮನ್ ಪೇರ್‌ಪಾಡಿ ಎಂದರೆ ಭುವಿಯಿಂದ ಬಾನಿನೆತ್ತರಕ್ಕೂ ಬೆಳೆದು ನಿಂತು ಭಕ್ತನನ್ನು ಅನುಗ್ರಹಿಸಿ ದೇವತೆಗಳಿಗೂ ರಕ್ಷಣೆ ನೀಡಿದ ಆ ದೇವದೇವನನ್ನು ಪಾಡಿ ಪೊಗಳಿದರೆ, ಭಕ್ತಿಯಮುನೆಯೊಳ್ಮಿಂದು ನರ್ತಿಸಿದರೆ, ನೀನು ಅನಾಥ ರಕ್ಷಕ ಎಂದು ಪಾಡಿದೊಡೆ ನಮ್ಮಲ್ಲಿರುವ ಈ ಅತಿಶಯ ಮೋಹ ಮದ ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳು ನಾಶವಾಗುತ್ತವೆ. ಜಗತ್ತಿನಲ್ಲಿ ಎಲ್ಲ ಕಷ್ಟನಷ್ಟಗಳೂ ನಶಿಸಿ ಭುವಿಯು ಸಿರಿ ಸಿಂಗಾರದಿಂದ ಮಲ್ಲಿಗೆ ಮುಡಿಯಲ್ಲಿ ತುಂಬು ಹೃದಯದಿಂದ ಹಸನ್ಮುಖಿಯಾಗಿ ಕಂಗೊಳಿಸುತ್ತಾಳೆ. ಇದನ್ನು ಕಂಡು ಭಾನು ಪರಿಪರಿಯ ಪುಷ್ಪಗಳ ಮಾಲೆಯನ್ನು ಭುವಿಗೆ ಮುಡಿಸಿ ನಲಿಯಲು ಬಾಗಿ ಬರುತ್ತದೆ. ಕೋಗಿಲೆಯು ಸದಾಕಾಲ ಕೃಷ್ಣಾ ಕೃಷ್ಣಾ ಎಂದು ಪಾಡಿ ಮನೋಲ್ಲಾಸವನ್ನು ಮಾಡುತ್ತಿರುತ್ತದೆ. ಗದ್ದೆಗಳಲ್ಲಿ ಬತ್ತದ ಪೈರು ನಮ್ಮೆತ್ತರಕ್ಕೂ ಬೆಳೆದು ತುಂಬು ಧಾನ್ಯದಿಂದ ನಲಿಯುತ್ತಿರುವಾಗ ಆ ನೀರಿನಲ್ಲಿರುವ ಮರಿಮೀನು ಜಲಚರಗಳೆಲ್ಲ ಯಾವ ಭಯವೂ ಇಲ್ಲದೆ ಸ್ವಚ್ಛಂದವಾಗಿ ಆಡುತ್ತಿರುತ್ತವೆ. ಹಸುಗಳು ಧಾರಾಕಾರವಾಗಿ ಹಾಲನ್ನು ಕೊಟ್ಟು ಕೊಡಭಾಂಡಗಳು ತುಂಬಿ ತುಳುಕುತ್ತಿರುತ್ತದೆ. ವಿಶ್ವಮಾತೆಯಾದ ಜನನಿ ಭಾರತಿಯು ಧನ-ಧಾನ್ಯ ಸಂಪತ್ತುಗಳಿಂದ ಕೂಡಿ ಪ್ರಸನ್ನವದನಳಾಗಿರುತ್ತಾಳೆ. ಭೂಮ್ಯಾಕಾಶಗಳಲ್ಲಿ ಸುಮಧುರ ವೇಧಘೋಷ ಮೊಳಗುತ್ತಿರುತ್ತದೆ.

ಇಷ್ಟೆಲ್ಲಾ ಫಲಗಳನ್ನೂ ಕರುಣಿಸುತ್ತಾನೆ ಆ ಕೊಳಲ ಕೃಷ್ಣ ನಮ್ಮ ವ್ರತಕ್ಕೆ ಮೆಚ್ಚಿ. ನಂದನಂದನ ಭಕ್ತಜನಪ್ರಿಯನು, ಒಮ್ಮೆ ಗೋವಿಂದಾ ಎಂದರೆ ಸಾಕು ಮಾತೆಯಂತೆ ಬಂದು ನಮ್ಮನ್ನು ಎತ್ತಿಕೊಂಡು ಅಮೃತವನ್ನೇ ವರ್ಷಿಸುತ್ತಾನೆ. ಕರಿರಾಜನನ್ನು ರಕ್ಷಿಸಿದ ಅಕ್ಷಯ ಫಲದಾತನಲ್ಲವೇ ? ಆದ್ದರಿಂದ ಬನ್ನಿ. ನನ್ನೆಲ್ಲ ಮೆಚ್ಚಿನ ಗೆಳತಿಯರೇ, ಭಕ್ತ ಭವದೀಯನನ್ನು ಸ್ತುತಿಸಿ ಧನ್ಯರಾಗೋಣ. ಇದರಿಂದ ಲೋಕಕಲ್ಯಾಣವಾಗಲಿ.







## ಪಾಶುರ-೪

ಆಳಿಮಳೈಕ್ಕಣ್ಣಾ ಒನ್ರುನೀ ಕೈಕರವೇಲ್
ಆಳಿಯುಳ್‌ಪುಕ್ಕು ಮುಹಂದು ಕೋಡಾರ್‌ತ್ತೇರಿ
ಊಳಿಮುದಲ್ವನ್ ಉರುವಂ ಪೋಲ್ ಮೆಯ್‌ಕರುತ್ತು
ಪಾಳಿಯನ್ತೋಳುಡೈ ಪರ್ಪನಾಭನ್ ಕೈಯಿಲ್
ಆಳಿಪೋಲ್‌ಮಿನ್ನಿ ವಲಂಪುರಿಪೋಲ್ ನಿನ್ರದಿರ್‌ನ್ದು
ತಾಳನ್ದೇ ಶಾರ್ಙ್ಗಮುದೈತ್ತ ಶರಮಳೈಪೋಲ್
ವಾಳ್‌ವುಲಗಿನಿಲ್ ಪೇಯ್‌ದಿಡಾಯ್ ನಾಂಗಳುಂ
ಮಾರ್ಗಳಿಲ್ ನೀರಾಡ ಮುಕಿಳಿಂದೇಲೋರೆಂಬಾವಾಯ್

**ಭಾವಾನುವಾದ - ೪**

*ಕೇಳುಕೇಳಯ್ಯ ಓ ವರುಣ ಒಲವ ಕೋರಿಕೆಯ ನಡೆಸಿ ನೆರವಾಗು*
*ನೀ ಜೀವ ಜೀವಕಾಧಾರಿ ಕೃಷ್ಣನೊಲುಮೆಯ ಪಡೆಯೆ ಸಹಕಾರಿ ನೀನಾಗು* //ಪ//

ಓ ವರುಣ ಓ ವರುಣ ಬೆಳೆಬೆಳೆದು ನಿಲ್ಲು ಬಾನಿನೆತ್ತರಕೆ ಪವಮಾನ
ಸುತನಂತೆ
ಪಾಂಚಜನ್ಯಶಾರ್ಙ್ಗಚಕ್ರಗಳಂತೆ ಮಿಂಚುತಭಯ ಧ್ವನಿಗೈದು
ಮಿಂದೆದ್ದು ಸಾಗರದಿ ಹರಿಸುನೀ ವರ್ಷಧಾರೆ ಧಾರೆ ಈ ಧರೆಗೆ
ತಪ್ಪಿದೊಡೆ ತಲ್ಲಣಿಸಿ ಸೃಷ್ಟಿ ಬಸವಳಿಯೆ ಖೇದಗೊಳ್ಳುವ ಭರದಿ
ಹೇಮಪುರಿ ನಿಲಯ ಸೃಷ್ಟಿಸ್ಥಿತಿಗೊಡೆಯ ಮಹೋತ್ಸಾಹ
ಧರ್ಮ ರಕ್ಷಣೆಗೆಂದು ಬಂದಿಹನು ಅನಂತಾನಂತ ನಂದನಂದನನಾಗಿ
ಸಿಂಧುಗಂಗೆ ಕಪಿಲೆಕಾವೇರಿ ಯಮುನೆ ಭೀಮ ಭದ್ರೇಯರೆಲ್ಲ
ತುಂಬಿಬರಲೀ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 4

### ಸಂಕ್ಷಿಪ್ತ ಭಾವಾರ್ಥ

ದೇಶ ಸುಭಿಕ್ಷವಾಗಿರಬೇಕಾದರೇ, ತನ್ನ ಮಕ್ಕಳು ಆನಂದದಿಂದ ಇರಬೇಕಾದರ ಏನಾಗಬೇಕು ? ಜಗನ್ಮಾತೃಯಾದ ಗೋದಾದೇವಿ ಇಲ್ಲಿ ವರುಣ ದೇವನನ್ನು ಪ್ರಾರ್ಥಿಸಿ ಎಚ್ಚರಿಸುತ್ತಿದ್ದಾಳೆ. ಓ ವರುಣದೇವ, ಸಾಕಷ್ಟು ಮಳೆಯನ್ನು ಸುರಿಸು. ಭುವಿಯಿಂದ ಬಾನಿನೆತ್ತರಕ್ಕೆ ಬೆಳೆದು ನಿಂತು ಹನುಮಂತನಂದು ಬಾನಿನೆತ್ತರಕ್ಕೆ ಬೆಳೆದು ಮಾತೆ ಸೀತೆಯ ಹೃದಯಕ್ಕೆ ಶ್ರೀರಾಮ ವೃತ್ತಾಂತಸುಧೆಯನ್ನು ಸುರಿಸಿದಂತೆ ನೀನೂ ಸಹ ಮಳೆಯನ್ನು ಸುರಿಸಬೇಕು.ಆದರೆ ನೀನು ಸುರಗಂಗೆಯನ್ನು ಕಳುಹುವ ಮುನ್ನ ಆರ್ಭಟಿಸಿ ಎಚ್ಚರಿಸಿ ಬಾ. ಕಾರುಣ್ಯಧಾರೆಯಂತೆ ಮಳೆಯು ಇಳೆಗಿಳಿದು ಬರಲಿ. ಸುರಂಗಗೆಯು ತಾನೇ ತಾನಾಗಿ ಹರಿದು ಬರಲಿ. ಕೇಳು ಮಕ್ಕಳು ಪ್ರರ್ಥಿಸುತ್ತಿದ್ದಾರೆ.' ಇಳಿದು ಬಾ ತಾಯಿ ಇಳಿದು ಬಾ ಇಳಿದು ಬಾ ತಾಯಿ ಇಳಿದು ಬಾ ಹರಿಯ ಅಡಿಯಿಂದ ಋಷಿಯ ತೊಡೆಯಿಂದ ನುಸಿಳಿ ಬಾ ಜೀವಜಲದಲ್ಲಿ ಒಂದಾಗಿ ಬಾ.' ಎಲ್ಲರ ಪ್ರಾರ್ಥನೆಯನ್ನು ಮನ್ನಿಸಿ ವರ್ಷಧಾರೆಯನ್ನು ಸುರಿಸು. ಕಡಲಾಳದಿಂದ ಮುಗಿಲೆತ್ತರಕ್ಕೆ ಕಡಲ ನೀರನ್ನೆ ಬಸಿದು ನೀಲವರ್ಣವಾಗಿಸಿ ಪಾರ್ಥಸಾರಥಿಯ ಪಾಂಚಜನ್ಯದಂತೆ ಶತ್ರುಗಳಿಗೆ ಭಯವನ್ನು, ಭಕ್ತರಿಗೆ ಅಭಯವನ್ನು ಉಂಟುಮಾಡಿ ಮತ್ತೆ ಭೋರ್ಗರೆದು ಆರ್ಭಟಿಸಿ, ಸುದರ್ಶನ ಚಕ್ರದಂತೆ ಮಿಂಚಿ ವಿಶ್ವಕ್ಕೆ ಅಚ್ಚರಿಯನ್ನುಂಟುಮಾಡುವಂತೆ ನೀಲವರ್ಣನ ಕೈಗಳಿಂದ ಚಿಮ್ಮುವ ಶರವರ್ಷದಂತೆ ವರ್ಷಧಾರೆ ಧಾರೆಯನ್ನೇ ಸುರಿಸು. ಒಂದು ವೇಳೆ ನೀನು ಮಳೆಯನ್ನು ಸುರಿಸದಿದ್ದರೆ, ಮರೆತರೆ, ಜೀವರಾಶಿ ತಲ್ಲಣಿಸಿ ಹೋಗುತ್ತದೆ.ಸೃಷ್ಟಿಸ್ಥಿತಿಗೊಡೆಯನಾದ ಹೇಮಪುರಿ ನಿಲಯ ಕೋಪಿಸಿ ಕೊಳ್ಳುತ್ತಾನೆ. ಮರೆಯದಿರು. ಏಕೆಂದರೆ ಧರ್ಮರಕ್ಷಣೆಗಾಗಿ ನಂದನಂದನನಾಗಿ ಭುವಿಗಿಳಿದು ಬಂದಿದ್ದಾನೆ. ಲೀಲಾವಿನೋದಿಯಾಗಿ.

ಆದ್ದರಿಂದ ನೀನು ಸುರಗಂಗೆಯನ್ನು ಭುವಿಗಿಳಿದು ಬರುವಂತೆ ಮಾಡು ವರ್ಷಾಕಾಲವೆಲ್ಲಾ ಸಿಂಧು, ಗಂಗೆ, ಯಮುನೆ ಕಪಿಲೆ, ಕಾವೇರಿ, ತುಂಗಭದ್ರೆಯರೆಲ್ಲಾ ತುಂಬಿ ಹರಿಯಲಿ. ಇದು ಭರತನಾಳಿದ ಭೂಮಿ ಎಂಬುದನ್ನು ನೆನಪಿನಲ್ಲಿಟ್ಟುಕೋ ಎಂದು ಭಾರತದ ಭವ್ಯ ಪರಂಪರೆಯನ್ನು ನಮಗೆ ನೆನಪಿಸುತ್ತಾ, ಪಾರ್ಥನೆ ಸಲ್ಲಿಸುತ್ತಾ ಮತ್ತೆ ನಮ್ಮನ್ನು ಎಚ್ಚರಿಸುತ್ತಿದ್ದಾಳೆ.

ಬನ್ನಿ ಗೆಳತಿಯರೇ, ಉಷಃಕಾಲದಲ್ಲಿ ಎದ್ದು ಭಕ್ತಿ ಜಲಧಿಯಲ್ಲಿ ಮಿಂದು ಜಗನ್ನಾಥನನ್ನು ಪ್ರಾರ್ಥಿಸೋಣ. ಭುವಿಯಲ್ಲಿ ವರ್ಷದಲ್ಲಿ ಮೂರು ಮೂರು ಬೆಳೆಗಳು ಬೆಳೆದು ದೇಶವು ಸುಭಿಕ್ಷವಾಗಲಿ. ಇದರಿಂದೆಮ್ಮ ವ್ರತವೂ ಈಡೇರಿ ಸಮಸ್ತ ಲೋಕಕ್ಕೂ ಮಂಗಳಉಂಟಾಗಲಿ.



## ಪಾಶುರ-೫

ಮಾಯನ್ನೈ ಮನ್ನು ವಡಮಧುರೈ ಮೈಂದನ್ನೈ

ತುಯಪೆರುನೀರ್ ಯಮುನೈತ್ತುರೈವನ್ನೈ

ಆಯರ್ ಕುಲತ್ತಿನಿಲ್ ತೋನ್ರುಮಣಿ ವಿಳಕ್ಕೈ

ತಾಯೈಕ್ಕುಡಲ್ ವಿಳಕ್ಕಂ ಶೆಯ್ದ ದಾಮೊದರನ್ನೈ

ತೂಯೋಮಾಯ್ ವಂದು ನಾಂ ತೂಮಲರ್ ತೂವಿತ್ತೊಳಿದು

ವಾಯಿನಾಲ್ ಪಾಡಿ ಮನತ್ತಿನಾಲ್ ಶಿಂದಿಕ್ಕ

ಪೋಯಪಳ್ಳೆಯುಂ ಪುಗದರುವಾ ನಿನ್ರನವುಂ

ತೀಯಿನಿಲ್ ತೂಶಾಗುಂ ಶೆಪ್ಪೇಲೋರೆಂಬಾವಾಯ್

**ಭಾವಾನುವಾದ - ೫**

*ಗೊತ್ತೇನೆ ನಿನಗಿದು ಓ ಸಖಿಯೆ ಗೊತ್ತೇನು ನಿನಗಿದು*
*ಅಪ್ರಮೇಯನ ಈ ಪರಿಯ ಸೊಬಗು ಗೊತ್ತೇನೆಗೊತ್ತೇನೆ* *||ಪ||*

ಅಚ್ಚರಿಯ ಶಿಶು ಗೋಕುಲದ ಕಣ್ಮಣಿ ನಂದಯಶೋದಾಕಂದ

ನವನೀತ ಚೋರನೆಂದೆನಿಸಿಹನು ವಸುದೇವ ದೇವಕೀ ತನಯ

ದಾಮೋದರನಾಗಿ ಸಾರಿಹನು ತಾ ಸಿಗುವೆ ಮಾತೆ ಮಮತೆಗೆಂದೆನುತ

ರಕ್ಷಿಸುತ ಯಕ್ಷರನು ಸಾರಿಹನು ಕಳೆವೆನಮಿತ ಜನ್ಮಗಳ

ಪಾಪರಾಶಿಯನೆಲ್ಲ

ಸಿಗುವೆ ನಾ ಸತತ ಚಿಂತಿಪರಿಗೆಂದೆನುತ ನಮ್ಮ ಯದುಶೈಲನಾಥ

ಕೃತಲಕ್ಷಣನು

ಭಾವಶುದ್ಧಿಯಲಿ ಶರಣಾಗಿ ಬೇಡಿದೋಡೆ ಗರುಡಗಮನ ಗೋಪತಿಯು

ಅಕ್ರೂರವರದ ಸಲಹುವನೆಮ್ಮ ಗೋವರ್ಧನೋದ್ಧಾರಿ ಕರುಣಾಂತರಂಗ

ಫಲಿಸಲಿಂತೆಲ್ಲರನುಪಮ ನೋಪಿ ತುಂಬುತೆಲ್ಲೆಡೆ ಮಂಗಳದ

ಮುಂಬೆಳಕು



## ಪಾಶುರ - 5



### ಸಂಕ್ಷಿಪ್ತ ಭಾವಾರ್ಥ

ಶ್ರೀಕೃಷ್ಣನ ಲೀಲಾ ವಿನೋದಗಳನ್ನು ವೈಭವವನ್ನು ವರ್ಣಿಸುವ ಗೀತೆ ಇದು. ಶ್ರೀಕೃಷ್ಣನು ಮಾಯಾಮಯನಾದ ಅಚ್ಚರಿಯ ಶಿಶು. ಗೋವಳರ ವಂಶದಲ್ಲಿ ಬಳೆದುಬಂದ ಮಹಾಬಲಶಾಲಿ. ಮಾತೆ ಯಶೋಧೆಯ ಕೈಯಲ್ಲಿ ತಾನೇ ಮೊಸರು ಕಡೆಯುವ ಹಗ್ಗದಿಂದ ಕಟ್ಟಿಸಿಕೊಳ್ಳುವುದರ ಮೂಲಕ ಜಗತ್ತಿಗೇ ಸಾರಿಸಾರಿ ಹೇಳುತ್ತಿದ್ದಾನೆ. ನಾನು ಮಾತೆ ಮಮತೆಗೆ, ಭಕ್ತರಿಗೆ ಮತ್ತು ಮಾತೃ ಪ್ರೇಮದಿಂದ ನನ್ನನ್ನು ನೋಡುವವರಿಗೆ ಮಾತ್ರ ಸಿಗುತ್ತೇನೆ.

ಆದ್ದರಿಂದ ಇಂತಹ ಅಕ್ರೂರವರದನಾದ ಸಹಸ್ರ ನಾಮಗಳಿಂದ ಸ್ತೋತ್ರ ಮಾಡಿಸಿಕೊಳ್ಳುವ ಶ್ರೀಹರಿಯಲ್ಲಿ ಭಾವಶುದ್ಧಿಯಿಂದ ಶರಣಾಗಿ ಬೇಡೋಣ.

ಶರಣಾಗತವತ್ಸಲ, ಕಾರುಣ್ಯಸಿಂಧು ನಮ್ಮ ಯದುಕುಲ ನಂದನ. ವಸುದೇವ ದೇವಕೀ ತನಯ. ಭಕ್ತಿಯಮುನೆಯಲ್ಲಿ ಮಿಂದು ಪಾಡಿ ನಲಿದಲ್ಲಿ ಕರುಣೆಯಿಂದ ನಮ್ಮನ್ನು ಉದ್ಧರಿಸುತ್ತಾನೆ. ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತ ಲೋಕಕ್ಕೆ ಮಂಗಳವಾಗಲಿ.





## ಪಾಶುರ-೬

ಪುಳ್ಳುಂ ಶಿಲಂಬಿನಕಾಣ್ ಪುಳ್ಳರೈಯನ್ ಕೋಯಿಲಿಲ್
ವೆಳ್ಳೈ ವಿಳಿಶಂಗಿನ್ ಪೇರರವಂ ಕೇಟ್ಟಿಲೈಯೋ
ಪಿಳ್ಳಾಯ್ ಯೆಳುಂದಿರಾಯ್ ಪೇಯ್‌ಮುಲೈ ನಂಜುಂಡು
ಕಳ್ಳಚ್ಚಕಟಂ ಕಲಕ್ಕಳಿಯ ಕಾಲೋಚ್ಚಿ
ವೆಳ್ಳತ್ತರವಿಲ್ ತುಯಿಲಮರ್ನ್ದ ವಿತ್ತಿನ್ನೈ
ಉಳ್ಳತ್ತುಕ್ಕೊಂಡು ಮುನಿವರ್ಗಳುಂ ಯೋಗಿಗಳುಂ
ಮೆಳ್ಳವೆಳುಂದು ಅರಿಯೆನ್ದ ಪೇರರವಂ
ಉಳ್ಳಂ ಪುಗುಂದು ಕುಳಿರೆನ್ದೇಲೋರೆಂಬಾವಾಯ್

ಭಾವಾನುವಾದ - ೬

*ಎಚ್ಚರಾಗದೇ ಓ ಸಖಿಯೆ ಎಚ್ಚರಾಗದೆ ಇನ್ನೂ ಓ ಗೆಳತಿ*
*ಏನಿದೀ ನಿನ್ನ ಅನುಪಮ ಪರಿಯೆ ಎಚ್ಚರಾಗೆನ್ನ ಸಖಿಯೆ* ||ಪ||

ವೇದಘೋಷಗಳೊಡನೆ ನವಿಲು ಕೋಗಿಲೆಗಳಾ ಸುಪ್ರಭಾತಧ್ವನಿ
ಮಾರ್ಧನಿಸಿ ಪಾಂಚಜನ್ಯದ ನಾದದಲೋಂಕಾರ ತಾನಾಗಿ
ಮುಗಿಲಮುಟ್ಟಿಹುದು ಸರ್ವದೃಗ್ವ್ಯಾಸನ ಕೀರ್ತನೆ ಎಚ್ಚರಾಗದೇ
ಸಖಿ ತಾಯ್ತನವನಿತ್ತ ಮೊಲೆಯುಂಡು ಶಕಟನಿಗಾಯ್ತು ಮೋಕ್ಷ
ಶತೃಮಿತ್ರರೆಲ್ಲರನು ಸಲಹುವೆನೆಂದವಗೆ ಸೀಮಾತೀತನಿಗೆ ನಮಿಸಿಹರು
ಎಚ್ಚರಾಗೆನ್ನಾತ್ಮಸಖಿ ಮುಕ್ತಿಮಾರ್ಗವ ಕೋರಿ ನುತಿಸೋಣ
ಜ್ಞಾನಗಮ್ಯನನು
ಒಲವ ನೋಂಪಿಂಗೆ ತಾನೊಲಿದು ವರವೀವ ಚೆಲುವ ಚೆನ್ನಿಗ ತಪ್ಪದೆಲೆ
ಫಲಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು



## ಪಾಶುರ - 6

ಸಂಕ್ಷಿಪ್ತ ಭಾವಾರ್ಥ





ಎಂತಹ ಕರುಣಾಮಯಿ ನಮ್ಮನಂದನ ಗೊತ್ತೆ ? ವಿಷವನ್ನು ಉಣಿಸಲೆಂದು ಬಂದ ಪೂತನಿಗೆ ತಾಯ್ತನದ ಆನಂದವನ್ನು ನೀಡಿ ಸ್ಥನ್ಯಪಾನ ಮಾಡಿ, ಮುಕ್ತಿಯನ್ನು ಇತ್ತವನು. ಸಂಹರಿಸಲು ಬಂದ ಶಕಟನನ್ನು ತನ್ನ ಪುಟ್ಟ ಪಾದಗಳಿಂದ ಒದ್ದು ಕೆಡವಿ ಆತನಿಗೆ ಮೋಕ್ಷವನ್ನು ಕರುಣಿಸಿದ ಕರುಣಾಮಯಿ. ಭಕ್ತನಾದ ಕರಿರಾಜ ನಾರಾಯಣ ಎಂದು ಕೂಗಿದಾಗ ಪಕ್ಷಿ ವಾಹನನಾಗಿ ಬಂದು ರಕ್ಷಿಸಿದನು. ಅಣ್ಣನ ಬೆದರಿಕೆಗಳಿಂದ ನೊಂದ ರುಕ್ಮಿಣಿಯು ಹೇ ಕೃಷ್ಣಾ ಎಂದು ಕೂಗಿದಾಗ ರಥವನ್ನೇರಿ ಬಂದು ರುಕ್ಮಿಣಿಯನ್ನು ಕೈಪಿಡಿದು ರಕ್ಷಿಸಿದನು.

ಇಂತಹ ಪರಮನ ಅಡಿದಾವರೆಗಳಲ್ಲಿ ಮೂಡಣದ ಹೊಂಬೆಳಕ ಸಿರಿಯುದಿಸುವ ಸುಮುಹೂರ್ತದಲ್ಲಿ, ವೇದಘೋಷಗಳು ಶ್ರೀವೈಷ್ಣವಾಲಯಗಳಲ್ಲಿ, ಅಲೆಯಾಗಿ ಪ್ರತಿಧ್ವನಿಸಿ, ಬ್ರಹ್ಮಾಂಡಕ್ಕೆಲ್ಲಾ ವ್ಯಾಪಿಸಿ, ಆನಂದವನ್ನು ಉಂಟುಮಾಡುವ ಸುಮುಹೂರ್ತದಲ್ಲಿ, ಪಾಂಚಜನ್ಯದ ಧ್ವನಿಯು ಓಂಕಾರವಾಗಿ ತರಂಗತರಂಗಗಳಲ್ಲಿ ತೇಲಿತೇಲಿ ಬರುತ್ತಿರುವ ವೇಳೆಯಲ್ಲಿ ಶಿರಬಾಗಿ ನಮಿಸೋಣ.

ಮಂಗಳದ ಮಾರ್ಗಶಿರ ಮಾಸದ ಶುಭ ವೇಳೆಯಲ್ಲಿ ಭಕ್ತಿಯಿಂದ ನಮಿಸಿ ಪ್ರಾರ್ಥಿಸಿದರೆ ತಪ್ಪದೇ ನಮ್ಮನ್ನು ಉದ್ಧರಿಸುತ್ತಾನೆ, ನಮ್ಮ ಸುಧಾಮಹೃತ್ಕಮಲವಾಸ, ರುಕ್ಮಿಣೀ ರಮಣ. ಇದರಿಂದ ನಮ್ಮ ವ್ರತವೂ ಈಡೇರಿ ಸಕಲ ಲೋಕಕ್ಕೂ ಮಂಗಳ ಉಂಟಾಗಲಿ.





## ಪಾಶುರ-೭

ಕೀಶು ಕೀಶನ್ರೆಂಗುಂ ಆನೈಚ್ಚಾತ್ತಮ್ ಕಲನ್ದು
ಪೇಶಿನ ಪೇಚ್ಚರವಮ್ ಕೇಟ್ಟಿಲೈಯೋ ಪೇಯಿಪ್ಪೆಣ್ಣೇ
ಕಾಶುಮ್ ಪಿರಪ್ಪುಂ ಕಲಹಲಪ್ಪ ಕೈ್ಪೇರ್ತ್ತು
ವಾಶನರುಂ ಕುಳಲಾಚ್ಚಿಯರ್ ಮತ್ತಿನನಾಲ್
ಓಶೈಪಡುತ್ತ ತಯಿರರವಮ್ ಕೇಟ್ಟಿಲೆಯೋ
ನಾಯಹಪೆಣ್‌ಪಿಳ್ಳಾಯ್ ನಾರಾಯಣನ್ ಮೂರ್ತಿ
ಕೇಶವನೈಪ್ಪಾಡವುಂ ನೀ ಕೇಟ್ಟೇ ಕಿಡತ್ತೀಯೋ
ತೇಶಮುಡೈಯೂಯ್ ತ್ತಿರವೇಲೋರೆಂಬಾವಾಯ್

**ಭಾವಾನುವಾದ - ೭**

*ಏನಿದೀ ನಿನ್ನ ನಿದ್ರೆಯಾ ನಟನೆ ಏನ್ನೊಲವ ಸಖಿಯೇ*
*ಏನಿದೇನಿದೀ ಸಖಿಯೆ ಈ ತಾಮಸವು ನಟನೆ ಸಾಕು ಸಾಕೆದ್ದು ಬಾರಮ್ಮ* *।।ಪ।।*

ಹಕ್ಕಿಗಳಿಂಚರ ಹೊನ್ನಕಾಂತಿಯ ಬೆಳಗು ದುಂಬಿಗಳ ಝೇಂಕಾರದಲಿ
ಕಡೆಗೋಲ್ದನಿಯೊಡನೆ ಅಂದಚೆಂದದ ಬಳೆಗಳ ಝಣಝಣಕ್ಕಾರ ಕೇಳಿಸದೇ
ಸಾಕು ನಿದ್ರೆಯ ನಟನೆ ನೋಡೈದಿಹರು ಭಕ್ತಶೇಖರರು ದರ್ಶನಕೆ
ಭಕುತಿ ಚೆಲುವೆ ನೀ ಬಂಧಿತಾ ಸಿಂಧುಶಯನ ನಿನಗತಿಶಯದಿ ಓ ಸಖಿಯೆ
ಹರಿಭಕ್ತಿಸಾರ ಸಾಗರಕೆ ನಡೆಸಮ್ಮ ಕಾಲ ಸರಿಯುವ ಮುನ್ನ
ಮಾರ್ಗಶಿರ ನೋಂಪಿಗೆಮ್ಮನನುಗೊಳಿಸಿ ನಡೆಸು ಬಾ
ಗೋಪತಿಯಡೆಗೆ
ಯೋಗಿಜನ ಹೃತ್ಕಮಲವಾಸನನು ಭವಭೀತಿ ಬಿಡಿಸೆಂದು
ನುತಿಸೋಣ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು.





## ಪಾಶುರ - 7

### ಸಂಕ್ಷಿಪ್ತ ಭಾವಾರ್ಥ

ಈ ಪಾಶುರವು ಗೋದಾದೇವಿಯು ತನ್ನ ಅತ್ಯಂತ ಪ್ರಿಯಳಾದ ಹಾಗೂ ಪರಮಾತ್ಮನ ಗುಣಗಾನಗಳಲ್ಲಿ ತಲ್ಲೀನಳಾಗಿರುವ ನಾಯಕಿ ಎನಿಸಿಕೊಂಡ ಗೋಪ ಬಾಲಿಕೆಯನ್ನು ಎಬ್ಬಿಸುತ್ತಿರುವಂತೆ ಪಾಡಿದ ಗೀತೆ.

ನೋಡಮ್ಮ ಮೂಡಣದಲ್ಲಿ ಬಾಲನೇಸರನು ಉದಯಿಸುತ್ತಿದ್ದಾನೆ. ಭಾರಧ್ವಾಜ ಪಕ್ಷಿಗಳು ಪರಸ್ಪರ ಗುಂಪು ಕಟ್ಟಿಕೊಂಡು ಚಿಲಿಪಿಲಿ ಗಾನ ಮಾಡುತ್ತಿವೆ. ಗೋಕುಲದ ಮನೆ ಮನೆಗಳಿಂದ ಗೋಪಿಯರೆಲ್ಲರು ಮೊಸರು ಕಡೆಯುತ್ತಿರುವ ಕಡಗೋಲಿನ ಧ್ವನಿ,ಬಳೆಗಳ ಝುಣಝುಣತ್ಕಾರ ಕೇಳಿ ಬರುತ್ತಿದೆ. ಈ ಎಲ್ಲಾ ನಾದವೂ ನಾರಾಯಣನ ನಾಮಸ್ಮರಣೆಯೇ ಎಂದು ಭಾವುಕಳಾಗಿದ್ದೀಯಾ? ನನಗೆ ಗೊತ್ತು ನಿನ್ನದು ಕಪಟ ನಿದ್ರೆ ಎಂದು. ನೊಡು ನೀನು ಭಕ್ತಾಗ್ರಗಣ್ಯೆ ಎಂದು ಕುಲಶೇಖರರೂ ಸಹ ಬಂದು ನಿನ್ನ ಮನೆಯ ಬಾಗಿಲಲ್ಲಿ ಭಕ್ತಿಯಿಂದ ನಿನ್ನ ದರ್ಶನಕ್ಕಾಗಿ ನಿಂತಿದ್ದಾರೆ. ನಿನ್ನ ಭಕ್ತಿ ಎಂಬ ಚೆಲುವಿನಲ್ಲಿ ನಮ್ಮ ರಂಗನಾಥನನ್ನು ಬಂಧಿಸಿರುವುದರಿಂದ ನೀನು ನಮ್ಮ ಮೇಲೆ ಕರುಣೆ ತೋರಿಸಿ ಬೇಗೆದ್ದು ಬಾ.

ಯೋಗಿಗಳ ಹೃತ್ಕಮಲವಾಸನಾದ ಶ್ರೀಹರಿಯ ದರ್ಶನವನ್ನು ಮಾಡಿಸೆಮಗೆ. ಗೆಳತಿಯರೆಲ್ಲಾ ಆದಾಗಲೇ ಸ್ನಾನಘಟ್ಟವನ್ನು ಸೇರಿದ್ದಾರೆ. ನಿನಗಾಗಿ ಎದುರುನೋಡುತ್ತಿದ್ದಾರೆ. ವೇಳೆ ವ್ಯರ್ಥವಾಗುವ ಮುನ್ನವೇ ಆ ಪರಂಧಾಮನನ್ನು ಧ್ಯಾನಿಸಿ ಅವನನ್ನು ಕೂಡಿ ಆಡಲು ನಮಗೆ ನಿನ್ನ ಸಹಾಯ ಬೇಕಾಗಿದೆ. ನೀನೇ ನಮಗೆ ಮಾರ್ಗದರ್ಶಿ ಎಂದು ಬಂದಿದ್ದೇವೆ. ನೀನು ನಮ್ಮೊಡನಿದ್ದರೆ ಸಾಕು ನಾವು ಶ್ರೀಕೃಷ್ಣನಲ್ಲಿ ನಮ್ಮನ್ನು ಈ ಭವಬಂಧನದ ಭಯದಿಂದ ರಕ್ಷಿಸೆಂದು ಪ್ರಾರ್ಥಿಸುತ್ತೇವೆ.

ದೇವ ದೇವ ಜಗನ್ನಾಥನನ್ನು ಯೋಗಿಗಳು ಸದಾಕಾಲ ತಮ್ಮ ಹೃತ್ಕಮಲದಲ್ಲಿ ಸ್ಥಾಪಿಸಿಕೊಂಡು ಆನಂದ ತುಂದಿಲರಾಗಿರುತ್ತಾರೋ ಅಂತಹ ಶ್ರೀವಿಷ್ಣುಚಿತ್ತ ಮುನಿ ಹೃದಯ ವಿಹಾರನಾದ ಅಪ್ರಮೇಯನನ್ನು ಭವಸಾಗರದಿಂದ ಪಾರುಗಾಣಿಸೆಂದು ಪ್ರಾರ್ಥಿಸೋಣ. ನೀನು ನಮ್ಮೊಡನಿದ್ದರೆ ಸಾಕು ನೀನು ನಮಗೆ ತೋರುವ ಕರುಣೆಯಿಂದ ಶ್ರೀ ಹರಿಯೂ ಸಹ ನಮ್ಮಲ್ಲಿ ಕರುಣೆ ತೋರಿಸಿ ರಕ್ಷಿಸುತ್ತಾನೆ. ಇದರಿಂದ ನಮ್ಮ ವ್ರತವೂ ಈಡೇರಿ ಸಕಲ ಲೋಕಕ್ಕೂ ಮಂಗಳ ಉಂಟಾಗಲಿ.





## ಪಾಶುರ-೮

ಕೀಳವಾನಂ ವೆಳ್ಳೆನ್ರೆರುಮ್ಮೈ ಶಿರುವೀಡು
ಮೇಯ್ವಾನ್ ಪರಂದನ ಕಾಣ್ ಮಿಕ್ಕುಳ್ಳಪ್ಪಿಳ್ಳೈಗಳುಂ
ಪೋವಾನ್ ಪೋಗಿನ್ರಾರೈ ಪೋಕ್ಕಾಮಲ್ ಕಾತ್ತುನ್ನೈ
ಕೂವುವಾನ್ ವಂದು ನಿನ್ರೋಂ ಕೋತು ಕುಲಮುಡೈಯ
ಪಾವಾಯ್ ಯೆಳುಂದಿರಾಯ್ ಪಾಡಿಪ್ಪರೈಕೊಂಡು
ಮಾವಾಯ್ ಪೆಳಂದಾನ್ನೈ ಮಲ್ಲರೈಮಾಟ್ಟಿಯ
ದೇವಾದಿ ದೇವನ್ನೈಚ್ಚೆನ್ರುನಾಂ ಶೇವಿತ್ತಾಲೆ
ಆವಾವೆನ್ರು ಅರಾಯನ್ರು ಅರುಳೇಲೋರೆಂಬಾವಾಯ್

**ಭಾವಾನುವಾದ - ೮**

*ಸಾಕು ಸಾಕಮ್ಮ ನಿನ್ನ ಯೋಗನಿದ್ರೆಯ ನಟನೆ ಓ ಗೆಳತೀ*
*ಬೇಗೆದ್ದು ಬಂದೆಮೆಗೆ ದಾರಿ ತೋರಮೆಗೆ ಎನ್ನಾತ್ಮ ಸಖಿಯೆ* ||ಪ||

ಕಾವಳದಿ ನಡೆದಿರಲು ಧೇನುಗಳಾತುರದಿ
ಜೀವಜಂತುಗಳೆಚ್ಚರಾಗುಹುವು
ಮಾರ್ಧನಿಸಿಹುದು ನಂದಗೋಕುಲ ಧೇನು ಘಂಟಾರವದಿ
ಎಚ್ಚರಾಗದೆ ಕೇಳಿಸದೇ ನಮ್ಮೊಲವ ಕರೆ ಎನಿದೀ ಯೋಗನಿದ್ರೆಯ ನಟನೆ
ನಡೆದಿಹರೆಲ್ಲ ಗೆಳತಿಯರು ಯಮುನೆಯಡೆಗೆ ಕಾದಿಹರು ನಿನಗಾಗಿ
ಅಶ್ವಕೇಶಿ ಚಾಣೂರಮರ್ಧನ ಕೇಶವನ ಚರಣ ದರ್ಶನಕೆ ನಡೆಸೆಮ್ಮ
ಯದುಕುಲೋತ್ತುಂಗ ಶೃಂಗ ಶಿಖರಾಭರಣನು ನಿನ್ನವನಲ್ತೆ ಸಖಿಯೇ
ವಿಷ್ಣುಚಿತಾತ್ಮನಿಲಯ ಚೆಲುವನಾರಾಯಣನು ತಾನೊಲಿವ
ನೀನಿರಲು ನಮ್ಮೊಡನೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು.





## ಪಾಶುರ - 8

### ಸಂಕ್ಷಿಪ್ತ ಭಾವಾರ್ಥ

ಇದು ಮತ್ತೊಬ್ಬ ಭಕ್ತ ಶ್ರೇಷ್ಠಳಾದ ಸಖಿಯನ್ನು ಎಬ್ಬಿಸುವ ಪರಿ. ಈ ಸಖಿ ತನಗೆ ಪರಾಮಾತ್ಮನಲ್ಲಿ ಅಧಿಕ ಪ್ರೀತಿ ಇದೆಯೋ ಅಥವಾ ತನ್ನಲ್ಲಿ ಶ್ರೀಹರಿಗೆ ಪ್ರೀತಿ ಅಧಿಕವೋ ? ಎಂದು ತಿಳಿಯುವ ಹಂಬಲ. ವ್ರತನಿಯಮಗಳಿಲ್ಲದೆಯೇ ಆತನನ್ನು ಒಲಿಸಿಕೊಳ್ಳಲಾಗುವುದಿಲ್ಲವೇ ? ವ್ರತ ನಿಯಮಗಳೇ ಬೇಕೆ ? ಎಂಬ ತರ್ಕದವಳು. ತನ್ನಲ್ಲಿ ತಾನು ಶ್ರೀಕೃಷ್ಣನೊಡನೆ ತಲ್ಲೀನಳಾಗಿರುವವಳು. ಇಂತಹ ಪರಮಸಖಿಯನ್ನು ನಿಜಸ್ಥಿತಿಗೆ ಬಂದು ನಮಗೆ ಮಾರ್ಗದರ್ಶನ ನೀಡು ಎಂದು ಎಬ್ಬಿಸುತ್ತಿದ್ದಾಳೆ ಮಾತೆ ಗೋದಾ ದೇವಿ.

ನೋಡು ಬಾಲನೇಸರನುದಿಸಿ ಮೂಡಣದಲ್ಲಿ ಬೆಳಕು ಕಾಣಿಸಿಕೊಳ್ಳುತ್ತಿದೆ. ಹಸುಕರುಗಳು ಅದಾಗಲೇ ಗಿರಿಗಳತ್ತ ನಡೆಯುತ್ತಿದ್ದು ಕೊರಳ ಘಂಟಾನಾದ ಗೋಕುಲದ ತುಂಬೆಲ್ಲಾ ತುಂಬಿದೆ. ಇಷ್ಟಾದರೂ ನೀನು ಒಬ್ಬ ಯೊಗಿನಿಯಂತೆ ಈ ಶಬ್ದವಾವುದನ್ನೂ ಕೇಳಿಯೂ ಕೇಳದವಳಂತೆ ನಿದ್ದೆಯ ನಟನೆಯನ್ನೂ ಮಾಡುತ್ತಿದ್ದೀಯೆ. ಎಲ್ಲಾ ಗೆಳತಿಯರೊಂದಾಗಿ ಆಗಲೇ ಯಮುನೆಯ ತಟಕ್ಕೆ ಹೊರಟ್ಟಿದ್ದಾರೆ. ನಿನ್ನ ಜೊತೆಗಾಗಿ ಎಲ್ಲರನ್ನು ತಡೆದಿದ್ದೇನೆ. ನೀನು ಶ್ರೀ ಕೃಷ್ಣನ ಅನುಪಮ ಭಕ್ತ ಶ್ರೇಷ್ಠಳು. ನೀನು ನಮಗೆ ಕೇಶವನ ಚರಣಕಮಲಗಳನ್ನು ದರ್ಶನ ಮಾಡುವ ಮಾರ್ಗವನ್ನು ತೋರಿಸಬೇಕಾದವಳು. ನಿನ್ನ ಭಕ್ತಿಗೆ ತನ್ನನ್ನು ತಾನೇ ಮರೆತಿರುವವನು ಶ್ರೀಕೃಷ್ಣ. ಮಹಿಮಾಂತರಂಗ. ಅಶ್ವಕೇಶಿ ಚಾಣೂರಮಲ್ಲರನ್ನೆಲ್ಲಾ ಹುಟ್ಟಡಗಿಸಿದ ಧೀರ. ಯದುಕುಲ ತಿಲಕ. ನೀನು ನಮ್ಮೊಡನಿದ್ದು ಈ ಮಾರ್ಗಶಿರ ವ್ರತವನ್ನು ಸುಸೂತ್ರವಾಗಿ ನೆಡೆಸಿಕೊಟ್ಟು ಸಾನುರಾಗದಿಂದ ಶ್ರೀ ಹರಿಯ ಒಲುಮೆಯನ್ನು ನಮಗೆ ಕೊಡಿಸು. ಇದರಿಂದ ನಮ್ಮ ವೈಶಿಷ್ಟಪೂರ್ವಣವಾದ ವ್ರತವು ಸಿದ್ದಿಸಲಿ. ನಳಿನಭಾವ ನಮಗೆ ವರಗಳನ್ನು ಕರುಣಿಸಲಿ. ಲೋಕ ಕಲ್ಯಾಣವೂ ಆಗಲಿ.

ಇಲ್ಲಿ ಭಕ್ತಶ್ರೇಷ್ಠರನ್ನು ಯಾವುದೇ ಕಾರಣಕ್ಕೂ ಬಿಡದೇ ಅವರನ್ನು ಮುಂದಿಟ್ಟುಕೊಂಡು ವ್ರತವನ್ನಾಚರಿಸಿರಿ. ಧನ್ಯರಾಗಿ. ಇದರಿಂದ ಪರಮಾತ್ಮನು ಶೀಘ್ರವಾಗಿ ಒಲಿಯುತ್ತಾನೆ ಎಂದು ನಮಗೆ ಮಾರ್ಗದರ್ಶನ ನೀಡುತ್ತಿದ್ದಾಳೆ ಮಾತೆ ಗೋದಾದೇವಿ.





## ಪಾಶುರ - ೯

ತೂಮಣಿಮಾಡತ್ತು ಚುಟ್ರುಂ ವಿಳಕ್ಕೆರಿಯ
ತೂಪಂಕಮಳಿತ್ತುಯಿಲಣೈಮೇಲೆ ಕಣ್ವಳರುಂ
ಮಾಮಾನ್ ಮಗಳೇ ಮಣಿಕ್ಕದವಂ ತಾಳ್ ತಿರುವಾಯ್
ಮಾಮೀರ್ವಳ್ಳೈ ಯೆಳುಪ್ಪೀರೋ ಉನ್ ಮಗಳ್ ತಾನ್
ಉಮ್ಮೈಯೋ ಅನಿಚ್ಚವಿಡೋ ಆನಂದಲೋ
ಏಮಪ್ಪೆರುಂ ತುಯಿಲ್ ಮಂತಿರಪ್ಪಾಟ್ಟಾಳೋ
ಮಾಮಾಯನ್ ಮಾಧವನ್ ವೈಕುಂದನ್ ಎನ್ರೆನ್ರು
ನಾಮಂ ಫಲವುಂ ನವಿನ್ರುಲೋರೆಂಬಾವಾಯ್

## ಭಾವಾನುವಾದ - ೯

*ಏನು ಮಮತೆಯೇ ನಿನಗೆ ನಿನ್ನಣ್ಣ ಕೃಷ್ಣನಲಿ ಓ ಸಖೀ*
*ನೀನೆ ನಮಗೀಗ ನೆರವಾಗಬೇಕಮ್ಮ ನಮ್ಮಾತ್ಮ ಸಖಿಯೇ* *॥ ಪ ॥*

ಭಕ್ತಿಜ್ಞಾನದ ಪರಿಮಳದ ಕಂಪಿನಾಗರ ನಿನ್ನರಮನೆಯು ಓ ಗೆಳತಿ
ಸಪ್ತಾದ್ರಿವಾಸನ ಮೈಮೆಯಲಿ ಮನ ಮರೆತಿಹೆಯೇನೇ ?
ಅಣ್ಣ ಪುಂಡರೀಕಾಕ್ಷನೇ ಬರಲೆಂಬ ಯೋಗನಿದ್ರೆಯು ತರವಹುದೇ
ಬಂದಿಹನು ಬಾಗಿಲಿಗೆ ಶ್ರೀ ರಂಗರಂಗ ಪಾಂಡುರಂಗ ಕರವಿಟ್ಟು
. ಕಟಿಯಲ್ಲಿ
ಕಳೆಯೆ ಮೋಹಮದ ಮಾತ್ಸರ್ಯಗಳನೆಲ್ಲ ಏಳೆನ್ನೊಲವ
ನಾದಿನಿಯೇ
ಮಾರ್ಗಶಿರದುದಯ ನೋಂಪಿಯನರುಹೆಮಗೆ ನಡೆಯೆ ಶಿಷ್ಟೇಷ್ಟ
ನೆಡೆಗೆ
ಕರುಣಾಳು ಬಾ ಬೆಳಕೆ ಕೈ ಹಿಡಿದು ನಡೆಸೆಮ್ಮ ಕೇಶವನ ಚರಣದೆಡೆಗೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ
ಮುಂಬೆಳಕು





## ಪಾಶುರ - 9

### ಸಂಕ್ಷಿಪ್ತ ಭಾವಾರ್ಥ

ಆದಿಶಕ್ತಿಯಾದ ಮಾಯೆಯು ದುರ್ಗಿಯಾಗಿ ಶ್ರೀಕೃಷ್ಣನ ತಂಗಿಯಾಗಿ ಅವತರಿಸಿದವಳು. ಅವಳಿಗೆ ಸರಿಸಮಾನಾದ ಗೆಳತಿಯನ್ನು ಎಬ್ಬಿಸುತ್ತಿದ್ದಾಳೆ ಈ ಪಾಶುರದಲ್ಲಿ.

ಮಾಮಾನ್ ಮಗಳೇ ಎಂದರೆ ಮಹಾ ಐಶ್ವರ್ಯವಂತನ ಮಗಳೇ ಎಂದೂ, ಅತ್ತೆಯ ಮಗಳು ಎಂದರೆ ಗಂಡನ ತಂಗಿ ಎಂದು ಕರೆಯುತ್ತಿದ್ದಾಳೆ. ಇಲ್ಲಿ ಶ್ರೀ ಕೃಷ್ಣನನ್ನೇ ತಮ್ಮ ಪತಿ ಎಂದು ಗೋದಾದೇವಿ ನಿಶ್ಚಯಿಸಿಬಿಟ್ಟಿದ್ದಾಳಾದ್ದರಿಂದ ಈ ಸಖಿಯನ್ನು ಶ್ರೀಕೃಷ್ಣನ ತಂಗಿ ಎಂದು ಕರೆಯುತ್ತಿದ್ದಾಳೆ. ಶ್ರೀಕೃಷ್ಣನನ್ನು ತನ್ನವನನ್ನಾಗಿಸಿಕೊಳ್ಳಲು ಅವನ ತಂಗಿಯನ್ನು ಸಹಾಯಕ್ಕೆ ಪಡೆಯಲಿಚ್ಛಿಸಿದ್ದಾಳೆ.

ಓ ಸಖಿ ನಿನ್ನ ಅರಮನೆಯಿಂದ ಭಕ್ತಿಯ ಪರಿಮಳದ ಸುಗಂಧ ಬರುತ್ತಿದೆ. ಅಂದರೆ ಸದಾ ನಾರಾಯಣನ ನಾಮಸ್ಮರಣೆಯೊಂದಿಗೆ ವೇದಗೀತೆಯ ಮಧುರಧ್ವನಿ ಬರುತ್ತಿದೆ. ನಿನ್ನಣ್ಣನೇ ಬಂದು ನಿನ್ನನ್ನು ಎಚ್ಚರಿಸಲೆಂದು ನಿದ್ರೆಯ ನಟನೆ ಮಾಡುತ್ತಿದ್ದೀಯ. ನೀನೂ ಸಹ ಯೋಗನಿದ್ರೆಯ ನಟನೆ ಮಾಡುವವಳೇ ಆಗಿದ್ದೀಯ. ನೋಡು ಅದಾಗಲೇ ಗೋವಿಂದನು ಬಂದು ನಿಂತಿದಾನೆ ಬಾಗಿಲಲ್ಲಿ. ಭವಬಂಧನದಿಂದ ಬಿಡಿಸುತ್ತೇನೆಂದು ಕಟಿಯಲ್ಲಿ ಕರವಿಟ್ಟು ಹಸನ್ಮುಖಿಯಾಗಿ ಬಂದು ನಿಂತಿದ್ದಾನೆ. ಆದ್ದರಿಂದ ಎದ್ದು ಭಾ ತಾಯಿ.

ನೀನು ನಮ್ಮೊಡನಿದ್ದರೆ ನಿನ್ನ ಆತ್ಮೀಯ ಗೆಳತಿಯರು ನಾವು ಎಂದು, ನಿನ್ನ ಮೇಲಿನ ಮಮತೆಯಿಂದ ತಪ್ಪದೇ ನಮ್ಮ ವ್ರತಕ್ಕೆ ಮೆಚ್ಚಿ ವರಗಳನ್ನು ಕೊಡುತ್ತಾನೆ. ನಮಗೆ ಭಕ್ತಿಮಾರ್ಗವನ್ನು ತಿಳಿಸಿ ನಮ್ಮನ್ನು ಉದ್ಧರಿಸುತ್ತಾನೆ ಎಂಬುದರಲ್ಲಿ ಸಂಶಯವಿಲ್ಲ.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತ ಲೋಕಕ್ಕೂ ಮಂಗಳವುಂಟಾಗಲಿ.





## ಪಾಶುರ - ೧೦

ನೋತ್ತುಚ್ಚುವರ್ಗಂ ಪುಕುಗಿನ್ರ ವಮ್ಮನಾಯ್
ಮಾತ್ತಮುಂ ತಾರಾರೋ ವಾಶಲ್ ತಿರುವಾರಾರ್
ನಾತ್ತತ್ತುಳಾಯ್‌ಮುಡಿ ನಾರಾಯಣನ್ ನಮ್ಮಾಲ್
ಪೋತ್ತ ಪರೈತರುಂ ಪುಣ್ಯಯನಾಲ್ ಪಣ್ಡೊರುನಾಳ್
ಕೂತ್ತತ್ತಿನ್ ವಾಯ್‌ವೀಳ್‌ನ್ದ ಕುಂಭಕರುಣನುಂ
ತೋತ್ತುಮುನಕ್ಕೇ ಪೆರುಂತುಯಿಲ್ ತಾನ್ ತಂದಾನೋ
ಅತ್ತವನನ್ದಲುಡೈಯಾಯ್ ಅರುಂಗಲಮೇ
ತೇತ್ತಮಾಯ್ ವಂದು ತಿರವೇಲೋರೆಂಬಾವಾಯ್

**ಭಾವಾನುವಾದ - ೧೦**

*ಏತಕೀ ತಾಮಸವು ಸುಜ್ಞಾನ ವಾರಿಧಿಯೇ ನಳಿನಾಕ್ಷಿ*
*ಓ ನನ್ನ ಅಂತರಾತ್ಮನ ಗೆಳತೀ ನೀಲಲೋಚನೆಯೇ* *// ಪ //*

ದಿನದಶವಾಯ್ತು ನಿದ್ರೆ ಧಾರೆಯನೆರೆದಿಹನೇ ಕುಂಭಕರ್ಣನು ನಿನಗೆ?
ಮನದ ಬಾಗಿಲ ತೆರಿದೆದ್ದು ಬಾ ನುಡಿಮುತ್ತನಾಲಿಸೆಮಗೆ
ನೀನೆಮ್ಮ ವಧುಕುಲಕಲಂಕಾರ ತಾರೆ ತಾರಾಮಂಡಲಕೆ ತಾರೆ
ಸುಜ್ಞಾನ ವಾರಿಧಿಯೇ ನಡೆಸೆಮ್ಮನೊಲವಿಂದ ಅಚ್ಯುತನ ಸನ್ನಿಧಿಗೆ
ಯೋಗಿಜನ ಹೃತ್ಕಮಲವಾಸ ಸಪ್ತಾದ್ರಿವಾಸನೈದಿಹನು ನಿನಗಾಗಿ
ನಿನ್ನ ನಲ್ನುಡಿಯ ಮೆಚ್ಚಿ ನೋಂಪಿಯ ವರವೀಯಲೈದಿಹನು
ಗೀತಗೋವಿಂದ ನಂದನಂದನ ತಾನೊಲಿವ ನೀನಿರಲು ನಮ್ಮೊಡನೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ
ಮಂಗಳದ ಮುಂಬೆಳಕು





## ಪಾಶುರ - 10

### ಸಂಕ್ಷಿಪ್ತ ಭಾವಾರ್ಥ

ಈ ಸಖಿಯಾದರೋ ಶ್ರೀಕೃಷ್ಣ ತನ್ನನ್ನು ಹುಡುಕಿಕೊಂಡು ಬಂದೇ ಬರುತ್ತಾನೆ. ಎಂಬ ಆತ್ಮವಿಶ್ವಾಸವನ್ನು ಉಳ್ಳವಳು. ಇಂತಹ ಭಕ್ತಶ್ರೇಷ್ಠಳು ಜೊತೆಗಿದ್ದರೆ ಸುಲಭವಾಗಿ ಕೃಷ್ಣ ಸಿಗುತ್ತಾನೆಂದು ಎಬ್ಬಿಸುತ್ತಿದ್ದಾಳೆ.

ಓ ಸಖಿ ಕುಂಭಕರ್ಣನು ರಾಮಬಾಣಕ್ಕೆ ತುತ್ತಾಗುವಾಗ ತನ್ನ ನಿದ್ರೆಯನ್ನು ಧಾರೆ ಎರೆದಿದ್ದಾನೆಯೆ ? ಅಂದರೆ ಕುಂಭಕರ್ಣನು ಮಹಾಭಾಗವತ. ಸಾವು ಆತನನ್ನು ಅಪ್ಪಲಿಲ್ಲ. ಅಣ್ಣನು ಬುದ್ದಿಮಾತನ್ನು ಕೇಳದಿದ್ದಾಗ ತಾನೇ ಮುಂದಾಗಿ ಯುದ್ಧಕ್ಕೆ ಹೋಗಿ ರಾಮ ಬಾಣಕ್ಕೆ ತನ್ನನ್ನು ತಾನು ಅರ್ಪಿಸಿಕೊಂಡವನು. ವಿಭೀಷಣನು ಅಣ್ಣನ ಪಕ್ಷವನ್ನು ತೊರೆದು ಶತ್ರುಪಕ್ಷಕ್ಕೆ ಸೇರಿದ್ದು ಧರ್ಮವಲ್ಲ. ಧರ್ಮಕ್ಕಾಗಿ ಪ್ರಾಣವನ್ನೂ ಲೆಕ್ಕಿಸಬಾರದು ಎಂದು ತಿಳಿದವನು ಕುಂಭಕರ್ಣ. ಅಣ್ಣನಿಗೂ ದ್ರೋಹಮಾಡದೇ ಅಂತರಾತ್ಮನಿಗೂ ದ್ರೋಹ ಮಾಡದೇ ಸಾಯುವುದೇ ಮೇಲೆಂದು ನಿಶ್ಚಯಿಸಿ ರಾಮಬಾಣಕ್ಕೆ ತುತ್ತಾದವನು. ಅಂತಹ ಭಾಗವತನಾದ ಕುಂಭಕರ್ಣನು ತನ್ನ ನಿದ್ರೆಯನ್ನು ನಿನಗೆ ಬಿಟ್ಟುಹೋದನೆ ಎಂದು ಒಲವ ಸಿಟ್ಟಿನಲ್ಲಿ ಕೇಳುತ್ತಾಳೆ. ನೀನು ಹೀಗೆ ನಿದ್ರೆಯ ನಟನೆ ಮಾಡಿದರೆ ನಮಗೆ ಮಾರ್ಗದರ್ಶನ ನೀಡುವವರಾರು ? ನೀನು ಮಹಾ ಯೋಗಿನಿ. ಭಾಗವತೋತ್ತಮಳು. ನಮ್ಮ ಸ್ತ್ರೀ ಸಮುದಾಯಕ್ಕೆ ಅಲಂಕಾರಪ್ರಿಯಳಾದವಳು.

ನೋಡು ನೀನು ಪರಿಪರಿಯಲ್ಲಿ ಗೋವಿಂದನನ್ನು ವರ್ಣಿಸುವ ಪರಿಯನ್ನು ಕಂಡುಕೇಳಿ ಆನಂದಿಸಿ ವರಗಳನ್ನು ಕೊಡಲೆಂದೇ ಬಂದಿದ್ದಾನೆ ಯದುಶೈಲನಾಥ.

ನೀನು ಸುಜ್ಞಾನಮೂರುತಿ. ಜ್ಞಾನವಾರಿಧಿ. ಜ್ಯೋತಿರಾತ್ಮಳು ನಿನ್ನ ನಿಜಭಕ್ತಿಜ್ಞಾನ ದೀವಿಗೆಯಿಂದ ರಾಮಾನುಜ ವರದಾಂಕಿತನಾದ ಶ್ರೀರಂಗನಾಥನ ದರ್ಶನಭಾಗ್ಯವನ್ನು ಮಾಡಿಸಲು ನೀನು ಸಮರ್ಥಳು.

ಆದ್ದರಿಂದ ನಿದ್ರೆಯ ನಟನೆ ಸಾಕುಮಾಡು. ಬೇಗೆದ್ದು ಬಾ. ನಮಗೆ ಮಾರ್ಗದರ್ಶನ ನೀಡು.

ಇದರಿಂದ ನಮ್ಮ ವ್ರತವು ಈಡೇರಿ, ಸಮಸ್ತ ಲೋಕಕ್ಕೂ ಮಂಗಳ ಉಂಟಾಗಲಿ.



## ಪಾಶುರ - ೧೧

ಕಟ್ರುಕ್ಕರವೈಕ್ಕಣಂಗಳ್ ಫಲಕರನ್ದು
ಶೆಟ್ರಾರ್‌ತಿರಲಳಿಯಚ್ಚೆನ್ರು ವೆರುಚ್ಚೆಯುಂ
ಕುಟ್ರ ಮೊನ್ರಿಲ್ಲಾದ ಕೋವಲರ್‌ತಂ ಪೋರ್ಕ್ಕೊಡಿಯೇ
ಪುಟ್ರರವಲ್ ಕುಲ್ ಪುನಮಯಿಲೇ ಪೋದರಾಯ್
ಶುಟ್ರತ್ತು ತೋಳ್‌ಮಾರೆಲ್ಲಾರುಂ ವಂದು ನಿನ್
ಮುಟ್ರಂ ಪುಕುಂದು ಮುಕಿಲ್ ವಣ್ಣನ್ ಪೇರ್ ಪಾಡ
ಶಿಟ್ರಾದೇ ಪೇಶಾದೇ ಶೆಲ್ವಪ್ಪೆಂಡಾಟ್ಟಿ ನೀ
ಎಟ್ರುಕ್ಕುರಂಗುಂ ಪೋರುಳೇಲೋರೆಂಬಾವಾಯ್

## ಭಾವಾನುವಾದ - ೧೧

*ಎಂಥ ಭಾಗ್ಯವತಿ ನಿನೆಂಥ ಭಾಗ್ಯವತಿಯೇ ಓ ಚೆಲುವೆ ಜಲಜಾಕ್ಷಿ*
*ಚೆಲುವ ಚೆನ್ನಿಗನ ಮನದನ್ನೇ ನೀನತಿ ಭಾಗ್ಯವತಿಯಮ್ಮ* *// ಪ //*

ಕೇಸರಿಯ ಕೆಣಕಿ ಸೆಣಸುವರು ಗೋಕುಲದ ಗೋವಳರು
ನೀನೀ ಕುಲಕೆ ರತ್ನಮಯ ಕಿರೀಟಿ ಪ್ರಭಾಪೂರ್ಣೆಂದು
ಗಿರಿಧರನೊಲುಮೆಯಾ ಸಖಿ ಹೊನ್ನವಿಲ ಕೇಶರಾಶಿನಿ ನೀ
ವಾಸುದೇವನನು ದೇವಕೀ ಕಂದನನು ಸ್ತುತಿಸಿಹರು ಸುರರೆಲ್ಲ
ಪದುಮನಾಭನ ಗುಣಗಾನ ಸಾಗರದಿ ನಿನ್ನನೀ ಮರೆತಿಹೆಯಾ ?
ನಮಗರುಹು ನಿನ್ನ ಭಕ್ತಿಯ ಪರಿ, ಜೀವ ಭಾವವನು ಜೀವಜೀವನಲಿ
ಲೀನವಾಗಿಸಲೆಮ್ಮ ನೋಂಪಿಗೆ ನೆರವಾಗು ತಾಳಲಾಗದು ವಿರಹ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ
ಮುಂಬೆಳಕು





## ಪಾಶುರ - 11

### ಸಂಕ್ಷಿಪ್ತ ಭಾವಾರ್ಥ

ಶ್ರೀಕೃಷ್ಣನ ಮತ್ತೊಬ್ಬ ಆಪ್ತಸಖಿಯನ್ನು ಎಬ್ಬಿಸುತ್ತಿದ್ದಾಳೆ ಈ ಪಾಶುರದಲ್ಲಿ ಈ ಸಖಿಯು ಶ್ರೀಕೃಷ್ಣನನ್ನು ತನ್ನ ಭಕ್ತಿ ಬಂಧನದಲ್ಲಿ ಸದಾಕಾಲ ಹಿಡಿದಿಟ್ಟುಕೊಂಡಿರುವವಳು.

ನೋಡಮ್ಮ ಭಕ್ತವೃಂದ ಅಧಿಕ ಸಂಖ್ಯೆಯಲ್ಲಿ ನಿನ್ನ ಮನೆಯ ಬಳಿ ಬಂದು ಕಾದಿದೆ. ಪರಮಪುರುಷನ ದರ್ಶನವನ್ನು ಮಾಡಿಸುವುದರ ಮೂಲಕ ತಮ್ಮನ್ನು ಧನ್ಯರಾಗಿಸಬೇಕೆಂದು ಪ್ರಾರ್ಥಿಸಿ ಕಾದು ನಿಂತಿದೆ. ಶ್ರೀನಿಧಿಯನ್ನು ಪಾಡಿ ಪೊಗಳಿದರೂ ನೀನು ಮಾತ್ರ ಯಾವುದೇ ರೀತಿಯಲ್ಲೂ ಚಲಿಸದೇ ಅಚಲಳಾಗಿ ಯೋಗನಿದ್ರೆಯಲ್ಲಿರುವಂತಿದೆಯಲ್ಲ ? ಅಥವಾ ಭಕ್ತರ ಗಾನಾಮೃತದಲ್ಲಿ ಮನಮರೆತು ನಿನ್ನನ್ನೇ ನೀನು ಮರೆತಿದ್ದೀಯೋ ?

ಆದರೆ ಓ ಗೆಳತಿ, ನೀನು ಹಾಗೆ ಮಾಡದೇ ನಮ್ಮೆಲ್ಲರನ್ನೂ ಕೈಹಿಡಿದು ನಡೆಸಿ ಹರಿಭಕ್ತಿಯ ಪರಿಮಳದಲ್ಲಿ ಮೀಯಿಸಿ ಈ ಜೀವನನ್ನು ಜೀವಜೀವನಲ್ಲಿ ಲೀನವಾಗಿಸಲು ದಾರಿ ತೋರಿಸು.

ನಿದ್ರೆಯ ನಟನೆ ಸಾಕು. ಅದಾವ ಕಾರಣದಿಂದಲೋ ಏನೊ ಇಹಲೋಕದಲ್ಲಿ ಜನಿಸಿ ಬಂದಿದ್ದೇವೆ. ಬಂದುದಕ್ಕೆ ಜನನ ಮರಣಗಳ ಹಿಡಿತದಿಂದ ನಮ್ಮನ್ನು ಪಾರುಗಾಣಿಸಿ, ಮುಕ್ತಿಮಾರ್ಗವನ್ನು ತೋರಿಸು ಎಂದು ಪ್ರಾರ್ಥಿಸೋಣ.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೂ ಮಂಗಳ ಉಂಟಾಗಲಿ.





## ಪಾಶುರ - ೧೨

ಕನೈತ್ತಿಳಂ ಕಟ್ರೆರುಮೈ ಕನುಕ್ಕಿರಂಗಿ
ನಿನೈತ್ತ್ ಮುಲೈವಳಿಯೇ ನಿನ್ರುಪಾಲ್‌ಶೋರ
ನನೈತ್ತಿಲ್ಲಂ ಶೇರಾರ್ಕುಂನರ್ಚ್ಚೆಲ್ವನ್ ತಂಗಾಯ್
ಪನಿತ್ತಲೈವೀಳಿನಿನ್ ವಾಶಳ್ ಕಡ್ಪೆಪತ್ತಿ
ಶಿನತ್ತಿನಾಲ್ ತೆನ್ನಿಲಂಗೈಕ್ಕೋಮಾನೈಚೆಟ್ರ
ಮನತ್ತುಕ್ಕಿನಿಯ್ಯಾ ಪ್ಪಾಡವುಂ ನೀವಾಯ್ ತಿರವಾಯ್
ಇನಿತ್ತಾನ್ ಎಳುಂದಿರಾಯ್ ಈದೆನ್ನಪೇರುರಕ್ಕಂ
ಅನೈತ್ತಿಲ್ಲತ್ತಾರುಂ ಅರೆನ್ದೇಲೋರೆಂಬಾವಾಯ್

ಭಾವಾನುವಾದ - ೧೨

*ಕೇಳದೇ ಸಖಿ ಕೇಳದೇನೇ ನಮ್ಮೊಲವ ಮೊರೆಯಿನಿತು*
*ಸುಜ್ಞಾನ ವಾರಿಧಿಯೇ ಸುವ್ರತಳು ನೀನಲ್ಲವೇನೇ ಕುಸುಮ ಕೋಮಲೆಯೇ* *// ಪ //*

ಮಹಿಷಿಗಳ ಕ್ಷೀರಧಾರೆ ತಾ ಹರಿದು ತಾಯ್ನೆಲದಿ ಕೆಸರೇ ಕೆಸರು ಎಲ್ಲೆಲ್ಲು
ನಿಲ್ಲಲೆಡೆಯಿಲ್ಲ ತೆರವಿಲ್ಲ ನಿನ್ನೆಡೆಗೆ ಬರಲೆಮಗೆ ಓ ಸಖಿಯೇ
ಮುಸುಕಿದೀ ಮಂಜಿನಲಿ ಕಾಣದಾಗಿದೆ ಸರಿದಾರಿ ನಿನ್ನರಮನೆಗೆ
ಶ್ರೀಧಾಮನೊಲುಮೆಯಾ ಸೋದರಿ ನೀನಂತರಂಗ ಭಕ್ತಳು
ಭಾನುಕುಲೇಶನಿಗೆ
ದಶಕಂಠಮರ್ಧನನ ಸೀತಾರಮಣನನು ನುತಿಸುತಿಹೆವೆಚ್ಚರಾಗಮ್ಮ
ಸಿರಿಮದವೆಂದತಿಶಯದಿ ನೆನೆವ ಮುನ್ನವೇ ಬಂದೆಮಗೆ ನೆರವಾಗು
ತೋರೆಮಗೆ ಜಗತ್ಸೇತುವಿನ ಚರಣ ನಿನ್ನನುಪಮ ಭಕುತಿ ಬೆಳಕಲ್ಲಿ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 12

**ಸಂಕ್ಷಿಪ್ತ ಭಾವಾರ್ಥ**

ಈ ಪಾಶುರದಲ್ಲಿ ಎಬ್ಬಿಸಲ್ಪಡುವ ಸಖಿಯು ಶ್ರೀಕೃಷ್ಣನ ಪರಮಾಪ್ತ ಸಖಿಯರಲ್ಲಿ ಮತ್ತೊಬ್ಬ ಅಗ್ರಗಣ್ಯಳು. ಅಲ್ಲದೇ ಶ್ರೀಧಾಮನೆಂಬ ಐಶ್ವರ್ಯವಂತನ ಸೋದರಿ. ಹೀಗಾಗಿ ಈಕೆಯನ್ನು ಮುಂದಿಟ್ಟುಕೊಂಡು ಹೋದರೆ ಶ್ರೀಕೃಷ್ಣನು ಸುಲಭವಾಗಿ ಒಲಿಯುತ್ತಾನೆ. ಭಕ್ತಾಗ್ರಣಿಗಳಿಲ್ಲದ ವ್ರತವು ವ್ಯರ್ಥ ಎಂದು ಈ ಸಖಿಯನ್ನು ಎಬ್ಬಿಸುತ್ತಿದ್ದಾಳೆ.

ಓ ಸಖಿ, ಇಲ್ಲಿ ಹಾಲಿನ ಹೊಳೆ ಹರಿದು ನಿಲ್ಲಲೂ ಎಡೆಯಿಲ್ಲದಾಗಿದೆ ಅಧಿಕವಾಗಿ ಹಾಲು ಕರೆಯುವ ಎಮ್ಮೆಗಳಿಂದ ಕೂಡಿರುವ ನನ್ನ ತಾಯ್ನಾಡಿನಲ್ಲಿ ವೇದಾಂತ ಸಂಗ್ರಹ ಕೆಚ್ಚಲುಗಳಿಂದ ಹಾಲು ಸಮೃದ್ದವಾಗಿ ಹರಿದು ಧಾರಕಾರವಾಗಿ ಹರಿದು ಬರುತ್ತಿದೆ. ಅಂದರೆ ತನ್ನ ತಾಯ್ನಡಾದ ಈ ಭಾರತದಲ್ಲಿ ವೇದಾಂತಿಗಳು ಅಧಿಕರಾಗಿ ವೇದವೇದಗಳ ಬಗ್ಗೆ ವಿಪುಲವಾದ ಚರ್ಚೆಗಳು ನಡೆದು ಪರಮಪದವನ್ನು ಸೇರಲು ಯಾವ ದಾರಿ ಸುಲಭ ? ಎಂಬುವ ಬಗ್ಗೆ ಏನನ್ನೂ ಅರಿಯದಂತಹ ಪರಿಸ್ಥಿತಿ ಬಂದೊದಗಿದೆ. ಜೊತೆಗೆ ಚಳಿಗಾಳಿ, ಮಂಜೂ ಸಹ ಸುರಿಯುತ್ತಿದೆ. ಒಟ್ಟಾರೆ ಸರಿದಾರಿಯೇ ಕಾಣುತ್ತಿಲ್ಲ. ಎಲ್ಲವೂ ಅಯೋಮಯವಾಗಿದೆ.

ಓ ಸಖಿ, ನಾವು ಅನಂತಪದ್ಮನಾಭನನ್ನು ವಿವಿಧ ಅವತಾರಗಳ ವರ್ಣನೆ ಮಾಡಿ ಪಾಡುತ್ತಿದ್ದರೂ ಸಹ ನಿನಗೆ ಎಚ್ಚರವಾಗಲಿಲ್ಲವೆ ? ನೋಡು. ಗೆಳತಿಯರೆಲ್ಲಾ ಆಗಲೇ ಬೇಸರಿಸುತ್ತಿದ್ದಾರೆ. ನಿನಗೆ ಶ್ರೀಕೃಷ್ಣನಲ್ಲಿ ಅಧಿಕ ಪ್ರೇಮ ಎಂಬ ಮದ ಜಾಸ್ತಿಯಾಗಿದೆ ಎಂದು ಅವರು ಮೂದಲಿಸುವ ಮುನ್ನವೇ ಅದಕ್ಕೆ ಅವಕಾಶವೀಯದಂತೆ ಇನುತ್ತಾನ್ ಎಳುಂದಿರಾಯ್, ಇನ್ನು ಮೇಲಾದರೂ ಎದ್ದು ಬಾ ನಮ್ಮನ್ನೂ ಸಹ ನಿನ್ನಂತೆ ಭಕ್ತಿ ಸಾಗರದಲ್ಲಿ ಮುಳುಗಿ ಜನ್ಮಸಾಫಲ್ಯ ಪಡೆಯುವಂತೆ ಮಾಡು.

ಸಂಸಾರ ಸಾಗರವನ್ನು ದಾಟಲು ಸೇತುವೆಯಂತಿರುವ ಆ ಜಗನ್ಮಂಗಳ ಮೂರ್ತಿಯನ್ನು ಸ್ತುತಿಸುವ ಪರಿಯನ್ನು ತಿಳಿಸು. ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೂ ಕಲ್ಯಾಣ ಉಂಟಾಗಲಿ.







## ಪಾಶುರ - ೧೩

ಪುಳ್ಳಿನ್‌ವಾಯ್ ಕೀಂಡಾನ್ನೈ ಪ್ಪೊಲ್ಲಾವರಕ್ಕನ್ನೈ
ಕಿಳ್ಳಿಕ್ಕಳೈನ್ದಾನ್ನೈ ಕ್ಕೀರ್ತಿಮ್ಮೈ ಪಾಡಿಪ್ಪೋಯ್
ಪಿಳ್ಳೈಕಳೆಲ್ಲಾರುಂ ಪಾವೈಕ್ಕಳಂ ಪುಕ್ಕಾರ್
ವೆಳ್ಳಿಯೆಳುನ್ದು ವಿಯಾಳಮುರಂಗಿತ್ತು
ಪುಳ್ಳುಂ ಶಿಲುಮ್ಬಿನಕಾಣ್ ಪೋದರಿಕ್ಕಣ್ಣಿನಾಯ್
ಕ್ಕುಳ್ಳಕ್ಕುಳಿರ ಕ್ಕುಡೈನ್ದು ನೀರಾಡಾದೇ
ಪಳ್ಳಿಕ್ಕಿಡತ್ತಿಯೋ ಪಾವಾಯ್ ನೀ ನನ್ನಾಳಾಲ್
ಕಳ್ಳನ್ತರಿನ್ದು ಕಲನ್ದೇಲೋರೆಂಬಾವಾಯ್

ಭಾವಾನುವಾದ - ೧೩

*ತೋರೆಮಗೆ ಸರಿದಾರಿ ತೋರೆಮಗೆ ಮಕ್ತಿ ಸಾಮ್ರಾಜ್ಯ*
*ನಾವು ನಿನ್ನವರೆಲ್ತೆ ನೀನು ನಮ್ಮವಳಲ್ಲವೇನೇ ಸಖೀ* *॥ ಪ ॥*

ಶಕಟಚಕಟರ ಕೊಂದ ಬಲಭೀಮ ದುರಾದರ್ಶ ಗೋಕುಲಾನಂದಕಂದ
ಕೋಸಲೆಯ ಕಂದ ದಶಕಂಠಮರ್ಧನ ಇನಕುಲ ಸೋಮನಾ
ವರಾಹ ವಾಮನನ ನರಹರಿಯ ರೂಪವೆಲ್ಲವೀ ಪರಮನಾಡುವ ಲೀಲೆ
ಎಂದೆನುತ
ಪರಿಪರಿಯ ಗುಣಗಾನದಿಂದೈದಿಹರು ಯಮುನೆಯೆಡೆಗೆಲ್ಲ ಸಖಿಯರು
ನೋಂಪಿಗೆಮ್ಮಮನವನನುಗೊಳಿಸಿ ತೋರುಬಾ ನಿಜಭಕ್ತಿ ಜ್ಞಾನ ಸರಿದಾರಿ
ತೋರೆಮಗೆ ಮುಕ್ತಿ ಸಾಮ್ರಾಜ್ಯ ಸಾಗರಕೆ ಸರಿದಾರಿ ಓ ಮಂಗಳಾಂಗಿ
ಅನಂತಜಿತನ ಸಿರಿಪಾದ ದರ್ಶನಕೆ ನೀನೆಮಗೆ ದೀವಿಗೆಯಾಗು ಬಾ
ಸಖಿಯೇ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 13

**ಸಂಕ್ಷಿಪ್ತ ಭಾವಾರ್ಥ**

ಭಕ್ತವೃಂದವನ್ನೇ ಜೊತೆಯಲ್ಲಿ ಕರೆದುಕೊಂಡು ಹೋದಲ್ಲಿ ಶ್ರೀಹರಿಯ ಕೃಪೆ ಶ್ರೀಘ್ರವೇ ಪ್ರಾಪ್ತಿಯಾಗುತ್ತದೆ ಎಂದು ಗೋದೆ ಇಲ್ಲಿ ನಮಗೆ ಪಾಶುರಗಳಲ್ಲಿ ಗೆಳತಿಯರನ್ನು ಎಚ್ಚರಿಸುವದರ ಮೂಲಕ ತಿಳಿಸುತ್ತಿದ್ದಾಳೆ. ಈ ಪಾಶುರದಲ್ಲಿನ ಮತ್ತೊಬ್ಬ ಸಖಿಯ ಒಲವನ್ನು ಪಡೆಯಲಿಚ್ಚಿಸಿದ್ದಾಳೆ.

ನೋಡಮ್ಮ ಸಖಿ ನಿನ್ನ ಮುದ್ದು ಕೃಷ್ಣ ಐದು ವರ್ಷದ ಬಾಲಕನಾಗಿರುವಾಗಲೇ ಬಕಾಸುರನ ಬಾಯನ್ನು ಸೀಳಿದ. ದುಷ್ಟರನ್ನು ಶಿಕ್ಷಿಸಿ,ಶಿಷ್ಟರನ್ನು ರಕ್ಷಿಸುವ ವ್ರತಧಾರಿ ಈತ. ಹಿಂದಿನನೇಕ ಅವತಾರಗಳಲ್ಲಿಯೂ ಧರ್ಮರಕ್ಷಣೆ ಮಾಡಿದ ಚಕ್ರಧಾರಿ.

ಕೋದಂಡಧರನಾಗಿ ರಾವಣಾಸುರನನ್ನು ಲೀಲಾಜಾಲವಾಗಿ ಕೊಂದವನೂ ಇವನೇ.

ಯುಗೆಯುಗಗಳಲ್ಲಿ ಭುವಿಗಿಳಿದು ಬಂದ ಧರ್ಮರಕ್ಷಕ ಆ ಕ್ಷೀರಸಸಾಗರ ಶಯನ ಈ ನಂದನಂದನ.

ಈತನ ಲೀಲಾವಿನೋದಗಳನ್ನು ವರ್ಣಿಸಲು ಆದಿಶೇಷನಿಗೂ ಸಹ ಸಾಧ್ಯವಿಲ್ಲ.

ಇಂತಹ ಪರಮನ ಭಕ್ತ ಶ್ರೇಷ್ಟಳು ನೀನು. ಬೇಗೆದ್ದು ಬಾ. ನಮಗೆ ಭಕ್ತಿಯ ಮಾರ್ಗದರ್ಶನ ನೀಡುವುದರ ಮೂಲಕ ನಮ್ಮನ್ನು ಉದ್ದರಿಸು.

ಶ್ರೀವೈಷ್ಣವ ಭಕ್ತಶ್ರೇಷ್ಠಳಾದ ನೀನೇ ಮುಕ್ತಿಮಾರ್ಗವನ್ನು ತೋರಿಸಲು ಸಮರ್ಥಳು. ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೂ ಮಂಗಳ ಉಂಟಾಗಲಿ.





## ಪಾಶುರ - ೧೪

ಉಂಗಳ್ ಪುಳ್ಳೈಕ್ಕಡೈ ತ್ತೋಟ್ಟತ್ತು ವಾವಿಯುಳ್
ಶೆಂಗಳುನೀರ್ ವಾಯ್‌ನೆಹಿಳೆನ್ದಾಂಬಲ್‌ವಾಯ್
ಕೂಂಬಿನಾಕಾಣ್
ಶೆಂಗಲ್‌ಪ್ಪೊಡಿ ಕ್ಕೂರೈವೆಣಿಪಲ್ ತವತ್ತವರ್
ತಂಗಳ್ ತಿರುಕ್ಕೋಯಿಲ್ ಶಿಂಗಿಡುವಾನ್ ಪೋಕ್ಕಿನ್ರಾರ್
ಎಂಗಳೈ ಮುನ್ನಮೆಳುಪ್ಪುವಾನ್ ವಾಯ್ ಪೇಶುಮ್
ನಂಗಾಯ್ ಎಳುಂದಿರಾಯ್ ನಾಣಾದಾಯ್
ನವುಡೈಯಾಯ್
ಶಂಗೋಡು ಶಕ್ಕರಮೇನ್ದುಂ ತಡೆಕ್ಕೈಯನ್
ಪಂಗಯಕ್ಕಣ್ಣಾನ್ನೈ ಪ್ಪಾಡೇಲೋರೆಂಬಾವಾಯ್

ಭಾವಾನುವಾದ - ೧೪

*ಏಕೆ ಮರೆತಿರುವೆ ನೀನಿತ್ತ ವಚನವನು ಎನ್ನಾತ್ಮ ಸಖಿಯೇ*
*ಏಕೆ ಮರೆತೆಯೇ ಮರೆತಂತೆ ನಟಿಸಿರುವೆ ತರವೆ ನಿನಗಿದು ಸಖಿಯೇ* *॥ ಪ ॥*

ಕೆಂದಾವರೆಯ ನಗೆ ಬಾಲನೇಸರನಾಗಮನಕ್ಕೆ ಸ್ವರ್ಣ ಕಿರಣದ ಕಾಂತಿ
ಮುನಿಗಳತಿಶಯದಿ ನಡೆದಿಹರು ಪಾಂಚಜನ್ಯವ ಮೊಳಗಿ ಮಾಧವನ
ದರ್ಶನಕೆ
ಅಭಯವನಿತ್ತವಳು ನೀ ಶೀಘ್ರದೊಳೆಳ್ಚರಿಸುವೆನೆಂದು ಅನಾಮಯನ
ಪಾಡಲ್ಕೆ
ತರವೆ ನಿನಗಿದು ಯೋಗನಿದ್ರೆಯ ನಟನೆ ಕಾದಿರಲು ನಾವೆಲ್ಲ ನಿನಗಾಗಿ
ಮೇರುಗಿರಿವಾಸ ಬದರಿನಾಥನ ಯತಿರಾಜ ವರದ ಚೆಲುವನರಗಿಣಿಯೇ
ನೀನೆ ನಮಗೆಲ್ಲ ಭಕ್ತಿರಸ ಸಾರಸುರಗಂಗೆ ಕಮಲಾಕ್ಷಿ ಕಮಲಕೋಮಲೆಯೇ
ತೋರೆಮಗನಂತ ಗುಣಸಾಗರ ಪರಮೇಷ್ಟಿಯ ಪಾದಪದುಮಗಳನು
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 14

### ಸಂಕ್ಷಿಪ್ತ ಭಾವಾರ್ಥ

ಈ ಪಾಶುರ ಗೋದಾದೇವಿಯು ಶ್ರೀಕೃಷ್ಣನ ಮತ್ತೊಬ್ಬ ಅಂತರಂಗ ಭಕ್ತಳೂ ಪ್ರಭಾವಿಯೂ ಆದ ಸಖಿಯನ್ನು ಎಬ್ಬಿಸುತ್ತಿರುವ ಪಾಶುರ. ಇಲ್ಲಿ ಗೋದದೇವಿಯು ತಾನ್ನೊಬ್ಬ ಸಾಧಾರಣ ಗೋಪಿಯೆಂಬುದಾಗಿ ಪರಿಭಾವಿಸಿ ಶ್ರೀಕೃಷ್ಣನ ದರ್ಶನವನ್ನು ಕೊಡಿಸೆಂದು ಈ ಭಕ್ತಾಗ್ರಗಣ್ಯಳನ್ನು ಎಬ್ಬಿಸುತ್ತಿದ್ದಾಳೆ.

ನೋಡಮ್ಮ ಸಖಿ, ನಿನ್ನರಮನೆಯು ಎಷ್ಟು ಸುಂದರವಾಗಿ ವಿಶಾಲವಾಗಿದೆ. ನಿನ್ನರಮನೆಯ ಅಂಗಳದಲ್ಲಿರುವ ಕೊಳದಲ್ಲಿ ಕಮಲಪುಷ್ಪಗಳು ಅರಳಿ ನಗುವನ್ನು ಸೂಸುತ್ತಿವೆ. ಅದಾಗಲೇ ಬೆಳಗಾಗುವುದರಲ್ಲಿದೆ ಎಂದು ತಪೋವನಗಳಲ್ಲಿರುವ ಋಷಿಗಳು ಎದ್ದು ಸ್ನಾನ ಮಾಡಿ ದೇವಾಲಯಗಳಿಗೆ ಶಂಖ ಧ್ವನಿಗೈಯ್ಯುತ್ತಾ ಹೋಗುತ್ತಿದ್ದಾರೆ.

ನೀನು ನಮಗೆ ಈ ಮೊದಲೇ ತಿಳಿಸಿದ್ದೆ. ನೀನು ಬೇಗೆದ್ದು ಬಂದು ನಮ್ಮನ್ನೆಲ್ಲಾ ಎಚ್ಚರಿಸುತ್ತೇನೆ ಎಂದು. ಆದರೆ ಎಲ್ಲಿ ? ಈಗ ನೀನೇ ಶ್ರೀಕೃಷ್ಣನನ್ನು ನಿನ್ನಂತರಂಗದಲ್ಲಿ ಸ್ಥಾಪಿಸಿಕೊಂಡು ಅಂತರ್ಮುಖಿಯಾಗಿದ್ದೀಯೆ. ನಾವೇ ನಿನ್ನನ್ನು ಹುಡುಕಿಕೊಂಡು ಬಂದಿದ್ದೇವೆ. ಇದು ನಿನಗೆ ತರವಲ್ಲ. ನೀನಲ್ಲದೆ ನಮ್ಮನ್ನು ಮುನ್ನಡೆಸುವವರು ಯಾರು ? ದಯಾಮಾಡಿ ಬೇಗೆದ್ದು ಬಾ.

ನೀನು ನಮ್ಮೊಡನಿದ್ದರೆ ಅನಂತಶಯನನ ದರ್ಶನವು ನಮಗೆ ಶೀಘ್ರವೇ ದೊರಕುತ್ತದೆ. ಇದರಿಂದ ನಮ್ಮ ಜನ್ಮ ಸಾರ್ಥಕವಾಗುತ್ತದೆ.

ಇದರಿಂದ ನಮ್ಮ ಈ ಮಾರ್ಗಶಿರಮಾಸದ ವ್ರತವೂ ಈಡೇರಿ, ಸಮಸ್ತಲೋಕಕ್ಕೂ ಮಂಗಳವಾಗಲಿ.





## ಪಾಶುರ - ೧೫

ಎಲ್ಲೇ ಇಳಂಕಿಳಿಯೇ ಇನ್ನುಮುರಂಗುದಿಯೋ
ಶಿಲ್ಲೆನ್ರಳೈಯೇನ್ಮಿನ್ ನಂಗೈಮೀರ್ ಪೋದರುಗಿನ್ರೇನ್
ವಲ್ಲೈಯುನ್ ಕಟ್ಟುರೈಗಳ್ ಪಣ್ಡೇಯುನ್ವಾಯರಿದುಂ
ವಲ್ಲಿರ್‌ಗಳ್ ನೀಂಗಳೇ ನಾನೇತಾನಾಯಿಡುಗ
ಒಲ್ಲೈ ನೀ ಪೋದಾಯುನಕ್ಕೆನ್ನ ವೇರುಡೈಯೈ
ಎಲ್ಲಾರು ಪೋನ್ದಾರೋ? ಪೋನ್ದಾರ್ ಪೋನ್ದೆಣ್ಣಿಕ್ಕೊಳ್
ವಲ್ಲಾನ್ಯೈ ಕೋನ್ನಾನೈ ಮಾತ್ತಾರೈ ಮಾತ್ತಳಿಕ್ಕ
ವಲ್ಲಾನೈ, ಮಾಯನೈಪ್ಪಾಡೇಲೋರೆಂಬಾವಾಯ್

## ಭಾವಾನುವಾದ - ೧೫

*ಬೇಗೆದ್ದು ಬಾ ತಾಯಿ ಸಾಕು ಮಾಡೀ ನಿನ್ನ ಕಾಲಹರಣದ ಆಟ*
*ಮೋಡಿ ಮಾತಿಗೆ ನಾವು ಮರುಳಾಗುವವರಲ್ಲಮ್ಮ ಭಾಗೀರಥಿಯೇ* // ಪ //

ಧ್ರುವತಾರೆ ನೀನಮ್ಮ ಭವ್ಯೆ ಭಾಗೀರಥಿಯೇ ಕಾದಿಹೆವು ನಿನಗಾಗಿ ಕಾತುರದಿ
ನೋಂಪಿಯನಾಚರಿಸಲೈದವರೆಷ್ಟು ತಪ್ಪಿದವರೆಷ್ಟೆಂದು ಕಾಲಹರಣವು ಬೇಡ
ಮಹಾಮುಖನ ಮದಗಜ ಮರ್ಧನನ ಚಾಣೂರಮಲ್ಲರ ಸಂಹರನ
ಮನೋಹರನ ಪವಮಾನ ಸುತ ಹೃತ್ಕಮಲವಾಸ ಪುರಾತನನ
ಪಾಹಿ ಪರಮಾತ್ಮ ಪಾಹಿ ಪಾರ್ಥಸಾರಥಿಯೇ ಪಾಹಿ ಆತ್ಮಾರಾಮ
ಎಂದಾಡಿ ತಪ್ಪದೆಯೇ ಸ್ತುತಿಸುವೆವು ನೀನಿರಲೆಮ್ಮ ನೋಂಪಿಯಲಿ
ನೆರವಾಗಿ
ದೇವೇಶ ಶೋಕನಾಶನನು ಸೀತಾರಮಣ ತಾನೋಲಿದು ಸಲಹುವನೆಮ್ಮ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 15

### ಸಂಕ್ಷಿಪ್ತ ಭಾವಾರ್ಥ

ಈಕೆ ಎಲ್ಲರಿಗಿಂತ ಹೆಚ್ಚು ಆತ್ಮ ವಿಶ್ವಾಸವುಳ್ಳವಳು. ಮಂದಗಾಮಿನಿ. ಶ್ರೀಕೃಷ್ಣ ತನ್ನನ್ನಗಲಿ ಎಲ್ಲೂ ಇರಲಾರ ಎಂಬ ತುಂಬು ವಿಶ್ವಾಸದವಳು. ಇದರ ಭಾವಾರ್ಥ ಶ್ರೀವೈಷ್ಣವ ಭಾಗವತ್ತೋತ್ತಮರೆಂದರೆ ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿ. ಅವರ ಹೃದಯದಲ್ಲಿ ಸದಾಕಾಲ ರಾರಾಜಿಸುತ್ತಿರುತ್ತಾನೆ ಎಂದು. ಇಂತಹ ಸಖಿ ಜೊತೆಗಿದ್ದರೆ ಶ್ರೀಹರಿಯ ದರ್ಶನ ಸುಲಭವಲ್ಲವೇ ಎಂದು ಗೋದಾದೇವಿ ಈಕೆಯನ್ನು ಎಬ್ಬಿಸುತ್ತಿದ್ದಾಳೆ. ಮಂದಗಾಮಿನಿಯಾದ ಈ ಸಖಿಯೋ ಎಲ್ಲರೂ ಬಂದಿದ್ದಾರೆಯೇ ? ಎಷ್ಟು ಜನ ಬಂದಿದ್ದಾರೆ ? ತಪ್ಪಿಸಿಕೊಂಡಿರುವವರೆಷ್ಟು ಮಂದಿ ? ಇತ್ಯಾದಿ ಪ್ರಶ್ನೆಗಳ ಸರಮಾಲೆಯಿಂದ ಕಾಲಹರಣ ಮಾಡುತ್ತಿದ್ದಾಳೆ.

ಆದರೆ ಗೋದಾದೇವಿ ಹಿಂದೆ ಬೀಳುವುದಿಲ್ಲ. ನೀನೇ ಎದ್ದು ಬಾ. ಎಣಿಸಿ ನೋಡು. ನಮ್ಮ ಭಾಗವತರ ಗುಂಪೆಲ್ಲಾ ಬಂದಿದೆ. ಅಲ್ಲದೆ ಆಳ್ವಾರರುಗಳೆಲ್ಲಾ ದ್ವಾದಶ ತಿರುನಾಮಗಳಿಂದಲಂಕೃತರಾಗಿ ಬಂದಿದ್ದಾರೆ. ತನ್ನನ್ನು ಕೊಲ್ಲಲೆಂದೇ ಬಂದ ಕುವಲಯಾಪೀಡವೆಂಬ ಮದಗಜವನ್ನು ಕೊಂದವನನ್ನು, ಕಂಸನಿಂದ ನಿಯುಕ್ತರಾಗಿದ್ದ ಚಾಣೂರಮಲ್ಲರನ್ನೂ ಸಂಹರಿಸಿದವನನ್ನು ಪ್ರಾರ್ಥಿಸೋಣ ಬಾ ಸಖಿ.

ಗೋದಾದೇವಿಯ ಭಕ್ತಿಯ ಆಗ್ರಹಕ್ಕೆ ಮಣಿದ ಸಖಿ, ಆಯ್ತಮ್ಮಾ ಆಯ್ತು ಬಂದೆ ಕಣೇ ಬಂದೆ. ನಿಮ್ಮಂತಹ ಶ್ರೀವೈಷ್ಣವ ಭಕ್ತಶಿರೋಮಣಿಗಳೊಡನಲ್ಲದೆ ಬೇರಿನ್ಯಾರೊಡನೇ ನಾನು ಶ್ರೀನಿಧಿಯನ್ನು ಪಾಡಿ ನಲಿಯಲಿ? ಮನುಕುಲಕ್ಕೆ ಭೂಷಣರೇ ಶ್ರೀ ವೈಷ್ಣವ ಭಾಗವತರು ಎಂದು ತಾನೆದ್ದು ಬರಲು ಸನ್ನದ್ಧಳಾಗುತ್ತಾಳೆ ಮತ್ತು ಇದರಿಂದ ಸಮಸ್ತ ಲೋಕಕ್ಕೂ ಕಲ್ಯಾಣವಾಗಲಿ ಎಂದು ಧ್ವನಿಗೂಡಿಸುತ್ತಾಳೆ.







## ಪಾಶುರ - ೧೬

ನಾಯಗನಾಯ್ ನಿನ್ನ ನನ್ದಗೋಪನುಡ್ಯೆಯ
ಕೋಯಿಲ್ ಕಾಪ್ಪಾನೇ ಕೊಡಿತ್ತೋನ್ರುಂ ತೋರಣ
ಪಾಶಲ್‌ಕಾಪ್ಪಾನೇ ಮಣಿಕ್ಕದವಂ ತಾಳ್ ತಿರುವಾಯ್
ಅಯರ್ ಶಿರುಮಿಯತೋಮುಕ್ಕು ಅರೈಪರೈ
ಮಾಯನ್ ಮಣಿವಣ್ಣನ್ ನೆನ್ನಲೇ ವಾಯ್‌ನೇರ್‌ನ್ದಾನ್
ತೂಯೋಮಾಯ್ ವನ್ದೋಂ ತುಯಿಲೆಳಪಾಡುವಾನ್
ವಾಯಾಳ್ ಮುನ್ನ ಮುನ್ನಂ ಮಾತ್ತಾದೇಯವತ್ತಾನೀ
ನೀಶನಿಲೈಕ್ಕದವಂ ನೀಕ್ಕೇಲೋರೆಂಬಾವಾಯ್

ಭಾವಾನುವಾದ - ೧೬

*ಕೇಳುಕೇಳಯ್ಯ ದ್ವಾರಪಾಲಕನೆ ಸುರರು ನಾವ್ ಬಂದಿಹೆವು*
*ಸುವ್ರತರು ಸುವ್ರತನ ನೋಡಲೈದಿಹೆವು ನನ್ನಿಯಲಿ ನುಡಿದಿಹೆವು* *॥ ಪ ॥*

ನಂದಗೋಪನರಮನೆಯ ದ್ವಾರಪಾಲಕನೆ ಜಯನೆ ವಿಜಯನೇ
ರತ್ನಮಣಿ ಖಚಿತ ಬಾಗಿಲನು ತೆರೆಯಣ್ಣ ಬಂದಿಹೆವು ಗೋಪಬಾಲೆಯರು
ಸುರರು ನಾವ್ ಸುವ್ರತನ ಗೆಳತಿಯರು ನೆರವಾಗು ಕೃಷ್ಣನದರ್ಶನಕೆ
ಜಗನ್ನಾಥನಾ ದರ್ಶನಕ್ಕೈದಿಹುದು ಮುನಿವೃಂದ ತಾಳದಂಡಿಗೆ ಪಿಡಿದು
ನೀಡಿಹನಭಯವನು ಬದರಿನಾಥನೆಂದೈದಿಹವು ನೋಂಪಿಯನಾಚರಿಸಿ
ನುಡಿದಿಹನು ಮುನ್ನಮೇ ಇಷ್ಟಾರ್ಥಗಳ ಸಲಿಸುವೆನೆಂದತಿಶಯದಿ
ಪ್ರೇಮಮೂರುತಿ ಕೃಷ್ಣೆಯಣ್ಣನ ದರ್ಶನಕೆ ಬಾಗಿಲನು ತೆರೆಯಣ್ಣ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 16

### ಸಂಕ್ಷಿಪ್ತ ಭಾವಾರ್ಥ

ಇದುವರೆವಿಗೂ ಒಬ್ಬೊಬ್ಬರನ್ನಾಗಿ ತನ್ನೆಲ್ಲ ಸಖಿಯರನ್ನೂ ಎಚ್ಚರಿಸಿದ್ದಾಯ್ತು. ಇನ್ನು ಶ್ರೀಕೃಷ್ಣನಿಗೆ ರಕ್ಷಕರಾಗಿರುವ ಎಲ್ಲರನ್ನೂ ಪ್ರಾರ್ಥಿಸಿ ಅವರ ಅನುಜ್ಞೆಯನ್ನು ಪಡೆದುಕೊಂಡೇ ಹೋಗಬೇಕಲ್ಲವೇ ? ಈ ೧೬ರಿಂದ ೨೦ರ ವರೆಗಿನ ಪದ್ಯಗಳು ಈ ಸಾಲಿಗೆ ಸೇರಿದವುಗಳು. ಮೊದಲಿಗೆ ನಂದಗೋಪನ ಅರಮನೆಯ ದ್ವಾರಪಾಲಕರನ್ನು ಹೊಗಳಿ ಅರಮನೆಗೆ ಪ್ರವೇಶವನ್ನು ಬಯಸಿದ್ದಾಳೆ ಗೋದಾದೇವಿ.

ಚಿನ್ನದ ಕುಸುರಿ ಕೆಲಸಗಳಿಂದ ಅಲಂಕೃತವಾದ ಬಾಗಿಲುಗಳ ಬಳಿ ಕೈಯಲ್ಲಿ ಗದೆಯನ್ನು ಹಿಡಿದು ಕಾಯುತ್ತಿರುವ ಜಯವಿಜಯರೇ ಬಾಗಿಲನ್ನು ತೆರೆಯಿರಿ. ನಮಗೆ ಶ್ರೀಕೃಷ್ಣನ ದರ್ಶನಕ್ಕೆ ಅವಕಾಶ ಮಾಡಿಕೊಡಿ. ನಾವು ಕೇವಲ ಗೋಪಾಲಕರೆಂದು ತಿಳಿಯಬೇಡಿರಿ. ನಾವುಗಳು ಸುರರು. ಶ್ರೀಕೃಷ್ಣನ ಲೋಕ ರಕ್ಷಣಾ ಕಾರ್ಯದಲ್ಲಿ ಆತನೊಡನೆ ಸಹಕರಿಸಲು ಬಂದವರು. ಜೊತೆಗೆ ಮುನಿವೃಂದವೂ ಸಹ ತಾಳದಂಡಿಗೆ ಪಿಡಿದು ಹಾಡುತ್ತಾ ಜಗನ್ನಾಥನ ದರ್ಶನಕಾಂಕ್ಷಿಗಳಾಗಿ ಬಂದಿದ್ದಾರೆ.

ಆಸೇತು ಹಿಮಾಲಯದಿಂದ ಕನ್ಯಾಕೂಮಾರಿಯವರೆವಿಗೂ ಬೆಳಗಿರುವ ಈ ಭವ್ಯಭಾರತದ ಎಲ್ಲ ೧೦೮ ಶ್ರೀ ವೈಷ್ಣವ ದಿವ್ಯಕ್ಷೇತ್ರಗಳಲ್ಲೂ ವಿರಾಜಮಾನವಾಗಿ ಭಕ್ತ ರಕ್ಷಕನಾಗಿರುವವನೇ ಈ ನಂದನಂದನನು ಎಂದು ಹೇಳಿ ಪರಿಚಯಿಸಿಕೊಂಡು ಬಾಗಿಲನ್ನು ತೆರೆಯಿರೆಂದು ಪ್ರಾರ್ಥಿಸಿದ್ದಾಳೆ.

ಮುಂದುವರಿಯುತ್ತಾ, ನೋಡಿ ದ್ವಾರಪಾಲಕರೇ ಮಧುರಾನಾಥನು ಈ ಮೊದಲೇ ನಮಗೆ ಮಂಗಳಕರವಾದ ಈ ಮಾರ್ಗಶಿರ ಮಾಸದ ವ್ರತವನ್ನು ಆಚರಿಸಿ ಬನ್ನಿ. ನಾನು ನಿಮಗೆ ಕೋರಿದ ವರಗಳನ್ನು ಕೊಟ್ಟು ಸಲಹುತ್ತೇನೆ ಎಂದು ತಿಳಿಸಿದ್ದಾನೆ. ಆದ್ದರಿಂದ ನಾವು ವ್ರತಧಾರಿಗಳಾಗಿ ಆತನ ಇಚ್ಛೆಯಂಂತೆ ಬಂದಿದ್ದೇವೆ. ಆದ್ದರಿಂದ ಬೇಗ ಅರಮನೆಯ ಬಾಗಿಲನ್ನು ತೆರೆಯಿರಣ್ಣ. ಶ್ರೀಕೃಷ್ಣನ ದರ್ಶನದಿಂದ ನಮ್ಮ ವ್ರತವು ಈಡೇರಿ ಸಮಸ್ತ ಲೋಕಕ್ಕೂ ಮಂಗಳವಾಗಲಿ.







## ಪಾಶುರ - ೧೭

ಅಂಬರಮೇ ತಣ್ಣೀರೆ ಶೋರೇ ಅರಂಶೈಯ್ಯುಂ
ಎಂಪೆರುಮಾನ್ ನನ್ದಗೋಪಾಲಾ ಎಳುಂದಿರಾಯ್
ಕೊಂಬನಾರ್ಕೆಲ್ಲಾಂ ಕೊಳುಂದೇ ಕುಲವಿಳಕ್ಕೇ
ಎಂಪೆರುಮಾಟ್ಟಿ ಯಶೋದಾ ಅರಿವುರಾಯ್
ಅಂಬರ ಮಾಡರುತ್ತೋಂಗಿ ಉಲಹಗಳಂದ
ಉಂಬರ್ಕ್ಕೋಮಾನೇ ಉರಂಗಾದೆಳುಂದಿರಾಯ್
ಶೆಂಬೊರ್ಕಳಿಲಡಿಶೆಲ್ವಾ ಬಲದೇವಾ
ಉಂಬಿಯುಂ ನೀಯುಂ ಉರಂಗೇಬೋರೆಂಬಾವಾಯ್

ಭಾವಾನುವಾದ - ೧೭

*ನಂದಯ್ಯ ನಂದಯ್ಯ ನಮ್ಮೂರ ಅಣ್ಣಯ್ಯ*
*ಎಷ್ಟು ಜನ್ಮದ ಪುಣ್ಯ ನೀ ನಾಡಿಸಿಹೆ ಚೆಲುವನನ್ನು* // ಪ //

ಕೊಳಲನೂದುವ ಚತುರ ಗಿರಿಯನೆತ್ತಿದ ಧೀರ ಗರುಡ ಗಮನ
ನಿನ್ನ ಮಗ/ಧನ್ಯ ನೀನತಿಶಯದಿ ನಂದಯ್ಯ ಬೇಗೆದ್ದು ಬಾ
ಕೃತಲಕ್ಷಣನ ಗೆಳತಿಯರೈದಿಹೆವು ಕೊಳಲ ಗಾನವ ಕೇಳಿ
ಧರ್ಮನಂದನನ ಕುಲದೈವ ವಿಶ್ವವಂದಿತ ಚರಣ ದೂರ್ವಾಸ ಮುನಿವರದ
ಜರಾಚರಕೊಡೆಯ ಚೇತನಾಚೇತನ ಜಗದೋದ್ಧಾರನನ್ನೇ ಆಡಿಸಿಹೆ
ನೀನತಿ ಭಾಗ್ಯವತಿಯಮ್ಮ ಯಶೋದಮ್ಮ ಬೇಗೆದ್ದು ಬಾರಮ್ಮ
ಅಣ್ಣನೀ ಬಲಭದ್ರ ನೀನುಡಿದು ವನಮಾಲಿಯ ದರ್ಶನವ ಕೊಡಿಸೆಮಗೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 17

### ಸಂಕ್ಷಿಪ್ತ ಭಾವಾರ್ಥ

ದ್ವಾರಪಾಲಕರಿಂದ ಅನುಮತಿ ಪಡೆದು ಅರಮನೆಯೊಳಕ್ಕೆ ಪ್ರವೇಶಿಸಿದ್ದಾಯ್ತು. ಇನ್ನು ಗೋಕುಲದ ಒಡೆಯನಾದ ನಂದಗೋಪ, ಯಶೋದೆ, ಬಲರಾಮ ಇವರ ಅನುಮತಿಗಾಗಿ ಪ್ರಾರ್ಥನೆ.

ಓ ನಂದಯ್ಯ, ಗೋವರ್ಧನ ಗಿರಿಯನ್ನು ಎತ್ತಿದ ಧೀರ, ಗಜೇಂದ್ರ ವರದ, ಗರುಡ ಗಮನ, ಕೊಳಲನೂದುವ ಚತುರ, ಹೀಗೆ ನಾನಾ ಹೆಸರುಗಳಿಂದ ಸ್ತುತಿಸಿಕೊಳ್ಳುವ, ಪವಾಡಗಳನ್ನೇ ತೋರಿಸಿದ ಆ ಪರಂಧಾಮನನ್ನೇ ನಿನ್ನ ಮಗನೆಂದು ಜನರು ಹೇಳುತ್ತಿದ್ದಾರೆ. ಅಲ್ಲದೆ ನೀನೂ ಸಹ ಕೊಡುಗೈದಾನಿ ಎಂದೂ ಸಹ ಜನರು ಮುಕ್ತ ಕಂಠದಿಂದ ಹೊಗಳುತ್ತಿದ್ದಾರೆ. ಎಷ್ಟು ಅದೃಷ್ಟಶಾಲಿ ನೀನು ಓ ನಂದಯ್ಯ. ನಾವುಗಳು ನಿನ್ನ ಮಗನ ಪ್ರೀತಿಯ ಗೆಳತಿಯರು. ಮಂಗಳದ ಮಾರ್ಗಶಿರ ವ್ರತವನ್ನಾಚರಿಸಿ ದರ್ಶನಕ್ಕಾಗಿ ಬಂದಿದ್ದೇವೆ. ನೀನು ಬೇಗೆದ್ದು ಬಾ. ನಮಗೆ ಶ್ರೀ ಹರಿಯ ದರ್ಶನಭಾಗ್ಯವನ್ನು ಕೊಡಿಸು ಎಂದು ಪ್ರಾರ್ಥಿಸುತ್ತಾಳೆ. ನಂತರ, ಅಮ್ಮಾ ಯಶೋದಮ್ಮ ನೋಡಿಲ್ಲಿ ಆಳ್ವಾರರುಗಳೆಲ್ಲಾ ದ್ವಾದಶನಾಮಗಳಿಂದ ತನುಮನಗಳನ್ನು ಅಲಂಕರಿಸಿಕೊಂಡು ಬಂದು ಶ್ರೀಕೃಷ್ಣನ ಗುಣಗಾನ ಮಾಡುತ್ತಲಿದ್ದಾರೆ. ದೂರ್ವಾಸಮುನಿಗಳಿಂದ ಪೂಜಿತನಾದವನೇ ಶ್ರೀಕೃಷ್ಣ, ಧರ್ಮನಂದನನ ಕುಲದೈವ. ಶ್ರೀ ವಿಷ್ಣುಚಿತ್ತರ ಹೃತ್ಕಮವಾಸನಾದ ಅಪ್ರಮೇಯ, ಇಷ್ಟೇಕೆ, ಈತನು ಚೇತನಾಚೇತನಕ್ಕೆ ಚೇತನನು ಎಂದು ಹಾಡುತ್ತಿದ್ದಾರೆ. ಅಬ್ಬ ! ಎಂತಹ ಅದೃಷ್ಟವಂತಳಮ್ಮ ನೀನು, ಇಂತಹ ಮಹಾಮಹಿಮನನ್ನು ಜಗದೋದ್ಧಾರನನ್ನೇ ನಿನ್ನ ಮಗನೆಂದು ಆಡಿಸುತ್ತಿದ್ದೀಯ,ನಿನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. ನೋಡಮ್ಮ ತಾಯಿ ನಾವು ಭಕ್ತಿಯಿಂದ ಮಾರ್ಗಶಿರ ವ್ರತವನ್ನು ಮಾಡಿ ನಿನ್ನ ಮಗನ ದರ್ಶನಾರ್ಥಿಗಳಾಗಿ ಬಂದಿದ್ದೇವೆ. ನೀನು ಬೇಗೆದ್ದು ಬಂದು ನಮಗೆ ನಿನ್ನ ಮುದ್ದು ಗೋಪಾಲನ ದರ್ಶನ ಮಾಡಿಸಮ್ಮ ಎಂದು ಪ್ರಾರ್ಥಿಸುತ್ತಾಳೆ.

ನಂತರ ಬಲಭದ್ರನ ಪ್ರಾರ್ಥನೆ. ಅಣ್ಣ ಬಲಭದ್ರಣ್ಣ ನೀನು ಬಲಶಾಲಿಗಳಲ್ಲಿ ಬಲಶಾಲಿ, ನೀನೇ ಕೃಷ್ಣನಿಗೆ ರಕ್ಷಾಕವಚವೆಂದು ಕೇಳಿದ್ದೇವೆ. ಅಲ್ಲದೆ ನಿನ್ನನ್ನು ಕಂಡರೇ ಶ್ರೀ ಕೃಷ್ಣನೂ ಭಯಪಡುತ್ತಾನಂತೆ ನಿನಗೇ ಮೊದಲು ನಮಸ್ಕರಿಸುತ್ತಾನಂತೆ. ಶ್ರೀ ಕೃಷ್ಣನ ದರ್ಶನವನ್ನು ಮಾಡಿಸು. ಇದರಿಂದ ನಮ್ಮ ವ್ರತವೂ ಈಡೇರಲಿ, ಸಕಲ ಲೋಕಕ್ಕೂ ಸನ್ಮಂಗಳವುಂಟಾಗಲಿ.



## ಪಾಶುರ - ೧೮

ಉನ್ದುಮದಕಳಿತ್ತನ್ ಓಡಾದ ತೋಳ್ವಲಿಯನ್
ನಂದಗೋಪಾಲನ್ಮರುಮಗಳೇ ನಪ್ಪಿನ್ನಾಯ್
ಕನ್ದಂ ಕಮಳುಂ ಕುಳಲೀ ಕಡೈತಿರವಾಯ್
ವಂದೆಂಗುಂ ಕೋಳಿಯಳೈತ್ತನಗಾಣ್ ಮಾಧವಿ
ಪ್ಪಂದಲ್ ಮೇಲಿಪಲ್‌ಗಾಲ್ ಕುಯಿಲಿನಂಗಳ್
ಕೂವಿನಕಾಣ್
ಪಂದಾರ್ ವಿರಲಿ ಉನ್ ಮೈತ್ತುನನ್ ಪೇರ್‌ಪ್ಪಾಡ
ಶೆನ್ದಾಮರೈಕ್ಕೈಯ್ಯಾಲ್ ಶೀರಾರ್ ವಳೈಯೊಲಿಪ್ಪ
ವಂದು ತಿರವಾಯ್ ಮಕಿಳೆನ್ದೇಲೋರೆಂಬಾವಾಯ್

**ಭಾವಾನುವಾದ - ೧೮**

*ದೇವಿ ದೇವಿ ನೀಳಾದೇವಿ ಓ ಸಿರಿಚೆಲುವೆ ಸಿರಿದೇವಿ ಸುರಧೇನು*
*ನೋಡು ಬಾರಮ್ಮ ಬಾ ತಾಯೆ ಕೃಷ್ಣನೊಲುಮೆಯೆ ಬಾರಮ್ಮ* *॥ ಪ ॥*

ನೀಳೆ ನೀನತಿ ಚೆಲುವೆ ನಂದನದನನ ಮನದನ್ನೆ ಸಿರಿವಾರಿಜಾತೆ
[illegible]
ಚೆಲುವ ಚೆನ್ನಿಗನ/ಬಂಧಿಸಿಹೆ ನಿನ್ನ ಭಕುತಿಯಾ ಸೆರೆಯಲ್ಲಿ
ಹಾಸಿಹಳು ಪುಷ್ಪರಾಶಿಯ ವಸುಧೆ ನೀ ಬರುವ ದಾರಿಯಲಿ
ಜಿಂಕೆ ಸಾರಂಗ ಕೇಸರಿಗಳತಿಶಯದಿ ಕಾದಿಹುವು ನಿನ್ನ ದರುಶನಕೆ
ಮಂಗಳದ ಕಂಕಣಾಭರಣ ಭೂಷಿತಳೆ ಚಂದ್ರ ಸೋದರಿಯೇ
ನೆರವಾಗು ಬಾ ನಮ್ಮನೋಂಪಿಯೊಳು ಶ್ರೀ ಕೃಷ್ಣ ದರ್ಶನಕೆ
ಅಗ್ರಣೀಯನ ದರುಶನವ ನೀಡೆಮಗೆ ಸಲಹು ಸಲಹೆಮ್ಮನನುನಯದಿ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 18

### ಸಂಕ್ಷಿಪ್ತ ಭಾವಾರ್ಥ

ದ್ವಾರಪಾಲಕರು ತಂದೆ ತಾಯಿ ಅಣ್ಣ ಎಲ್ಲರನ್ನೂ ಪ್ರಾರ್ಥಿಸಿದ್ದಾಯ್ತು. ಇನ್ನು ಶ್ರೀ ಕೃಷ್ಣನ ಹೃತ್ಕಮಲವಾಸಿನಿಯಾದ ನೀಳಾದೇವಿಯನ್ನು ಪ್ರಾರ್ಥಿಸುತ್ತಿದ್ದಾಳೆ. ಈ ಪಾಶುರದಲ್ಲಿ.

ಅಮ್ಮಾ ನೀಳಾದೇವಿ, ನವಿಲುಗರಿಗಳಂತೆ ನಿನ್ನ ಕೇಶರಾಶಿ ಕಂಗೊಳಿಸುತ್ತಿದೆ. ನೀನು ಎಷ್ಟು ಸುಂದರಳಾಗಿ ಕಂಗೊಳಿಸುತ್ತಿದ್ದೀಯೆ. ನಿನಗೆ ನೀನೇ ಸಾಟಿ. ಶ್ರೀ ಕೃಷ್ಣನ ಪ್ರೀತಿಗೆ ನೀನೇ ಒಡೆಯಳಲ್ಲವೆ ? ನಿನ್ನಂತಹ ಸೌಭಾಗ್ಯವತಿ ಬೇರೆ ಯಾರೂ ಇಲ್ಲ. ನೀನು ಸರ್ವಮಂಗಳೆ, ಸರ್ವರಿಗೂ ಮಂಗಳವನ್ನುಂಟುಮಾಡುವವಳು, ಕಾರುಣ್ಯಮಯಿ.

ನಿನ್ನ ಭಕ್ತಿ ಚೆಲುವಿಗೆ ಶ್ರೀ ಕೃಷ್ಣ ನಿನಗೆ ಬಂದಿಯಾಗಿದ್ದಾನೆ. ನೀನು ಬೇಗೆದ್ದು ಬಾ, ನೀನು ಬರುತ್ತೀಯೆಂದು ನಿನ್ನ ಪಾದಗಳಿಗೆ ಯಾವ ರೀತಿಯಲ್ಲೂ ನೋವಾಗಬಾರದೆಂದು ವಸುಂಧರೆಯು ಹೂವಿನ ನಡೆಮುಡಿ ಹಾಸಿದ್ದಾಳೆ. ತಂಗಾಳಿ ಮೃದುವಾಗಿ ಬೀಸುತ್ತಿದೆ. ಜಿಂಕೆ ಸಾರಂಗ ಕೇಸರಿಗಳಾದಿಯಾಗಿ ಸಕಲ ಮೃಗಪಕ್ಷಿಗಳೂ ಆ ನಿನ್ನ ಲೋಕ ಮೋಹಕ ರೂಪವನ್ನು ಕಾಣಲು ನಿನ್ನೊಡನಿರುವ ಶ್ರೀಕೃಷ್ಣನ ದರ್ಶನಭಾಗ್ಯದಿಂದ ಪುನೀತರಾಗಲು ತುದಿಗಾಲಿನಲ್ಲಿ ನಿಂತಿವೆ.

ಓ ನೀಳಾದೇವಿ ನೀನು ನಮ್ಮೊಡನೆದ್ದರೆ ಸಾಕು, ನಿನ್ನಂತರಂಗದ ಗೆಳತಿಯರು ನಾವು ಎಂದು ಕರುಣೆಯಿಂದ ಶ್ರೀ ಕೃಷ್ಣನು ನಮಗೆ ಮುಕ್ತಿಯನ್ನು ಕರುಣಿಸುತ್ತಾನೆ. ಇದರಿಂದ ನಮ್ಮ ವ್ರತವೂ ಈಡೇರಿ ಸಕಲ ಲೋಕಕ್ಕೂ ಮಂಗಳವನ್ನುಂಟುಮಾಡಲಿ.









## ಪಾಶುರ - ೧೯

ಕುತ್ತುವಿಳಕ್ಕೆರಿಯಕ್ಕೋಟ್ಟುಕ್ಕಾಲ್ ಕಟ್ಟಿಲ್ ಮೇಲ್
ಮೆತ್ತೆನ್ರ ಪಂಚಶಯನತ್ತಿನ್ಮೇಲೇರಿ
ಕೊತ್ತಲರ್ ಪೂಂಕುಳಲ್ ನಪ್ಪಿನ್ನೈ ಕೊಂಗೈಮೇಲ್
ವೈತ್ತುಕ್ಕಿಡನ್ದ ಮಲರ್ ಮಾರ್ಬಾವಾಯ್ ತಿರವಾಯ್
ಮೈತ್ತಡಂ ಕಣ್ಣಿನಾಯ್ ನೀಉನ್ ಮಣಾಳನೈ
ಎತ್ತನೈಪೋದುಂ ತುಯಿಲೆಳ ವೊಟ್ಟಾಯ್‌ಕಾಣ್
ಎತ್ತನೈಯೇಲುಂ ಪಿರಿವಾತ್ತ ಕಿಲ್ಲಾಯಾಲ್
ತತ್ತುವಮನ್ರು ಕಳವೇಲೋರೆಂಬಾವಾಯ್

## ಭಾವಾನುವಾದ - ೧೯

*ಬೇಡುವೆವು ಬಾರಮ್ಮ ಬಾಬಾರೆ ಚೆಲುವನರಗಿಣಿಯೇ*
*ನೀ ಬಾರದಿರೆ ಕೃಷ್ಣ ತಾ ಬಾರನೇ ಬಾರನೇ ಸಖಿಯೇ* || ಪ ||

ಶ್ರೀರಂಗರಂಗ
ನಿನ್ನನಗಲಿರಲಾರ ಲೋಕಸಾಗರ/ಚೆಲುವಚೆನ್ನಿಗ ಚತುರಾತ್ಮ
ಬಂಧಿ ನಿನ್ನನುಪಮ ಭಕುತಿಯ ಸೆರೆಯಲ್ಲಿ ಸರ್ವವಾಗೀಶ್ವರೇಶ್ವರನು
ನಿಗಮಾನುತ ಚರಿತನನು ತೋರೆಮಗೆ ನುಡಿಸು ಬಾ ವಿಮಲೆ
ಮಾರ್ಗಶಿರ ನೋಂಪಿಯ ಜೊತೆಗೂಡಿ ಸಲಹೆಮ್ಮ ಶ್ರೀರಮಣಿ
ಮರೆಯದಿರಮ್ಮ ಬಂದಿಹೆವು ಮಾಧವನ ಮಧುಸೂದನನ ದರ್ಶನಕೆ
ಕಾಲ್ಬೆರಳ ಬಾಯೊಳಿಟ್ಟು ನಲಿದ ಅಪ್ರಮೇಯನ ಸುಂದರನ
ಲೀಲಾವತಾರಿಯ ದರ್ಶನವ ನೀಡೆಮಗೆ ನೀ ಮುಕ್ತಿದಾಯಕಿಯೇ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು



## ಪಾಶುರ - 19

**ಸಂಕ್ಷಿಪ್ತ ಭಾವಾರ್ಥ**





ಮತ್ತೆ ಮುಂದುವರಿಯುತ್ತಾ ಪ್ರಾರ್ಥಿಸುತ್ತಿದ್ದಾಳೆ, 'ಅಮ್ಮಾ ನೀಳಾದೇವಿ, ನೀನು ಚೆಲುವ ಚೆನ್ನಿಗನ ಮನದನ್ನೆ ಸುತ್ತಲೆಲ್ಲೆಡೆಯಲ್ಲೂ ಕತ್ತಲು ಆವರಿಸಿದ್ದರೂ ಸಹ ನಿನ್ನರಮನೆಯಲ್ಲಿ ಭಕ್ತಿಯ ಪ್ರಭಾವಲಯದಿಂದಾಗಿ ಸದಾಕಾಲ ಪ್ರಕಾಶಮಾನವಾಗಿ ಕಂಗೊಳಿಸುತ್ತಿದೆ.

ನಿನ್ನ ಅನಪಮ ಭಕ್ತಿ ಅಪ್ಪುಗೆಯಲ್ಲಿ ಶ್ರೀಕೃಷ್ಣನನ್ನು ಸದಾ ಬಂಧಿಯನ್ನಾಗಿಸಿಕೊಂಡಿರುವೆ. ಸ್ವಲ್ಪ ವೇಳೆಯಾದರೂ ನಮಗಾಗಿ ನೀನು ಆತನ ದರ್ಶನವನ್ನು ನಮಗೆ ಮಾಡಿಸಬಾರದೆ ?

ನಾವುಗಳು ಇಹದಲ್ಲಿ ಭೋಗ ಭಾಗ್ಯಗಳ ಕಾಮನೆಗಳನ್ನು ತ್ಯಜಿಸಿ ತದೇಕಚಿತ್ತದಿಂದ ಮಾರ್ಗಶಿರಮಾಸದಲ್ಲಿ ಭಕ್ತಿಯಮುನೆಯಲ್ಲಿ ಮಿಂದು ಹರಿನಾಮ ಸ್ಮರಣೆ ಮಾಡುತ್ತಾ ಹಾಲು ಮೊಸರು ಬೆಣ್ಣೆ ತುಪ್ಪಗಳೇನನ್ನೂ ಆಶಿಸದೇ ಕೇವಲ ಭಕ್ತಿ ರಸಪಾನದಿಂದ ಬಂದಿದ್ದೇವೆ. ನೀನು ನಮಗೊಲಿದು ಕೃಷ್ಣೆಯಣ್ಣನ ದರ್ಶನವನ್ನು ಕೊಡಿಸಿ ನಮ್ಮನ್ನುದ್ದರಿಸು.

ಶ್ರೀಕೃಷ್ಣನ ದರ್ಶನಭಾಗ್ಯದಿಂದ ನಮ್ಮ ಈ ಮಾರ್ಗಶಿರ ಮಾಸದ ವ್ರತವು ಈಡೇರಿ, ಸಮಸ್ತಲೋಕಕ್ಕೂ ಮಂಗಳ ಉಂಟಾಗಲಿ.





## ಪಾಶುರ - ೨೦

ಮುಪ್ಪತ್ತು ಮೂವರಮರಕ್ಕು ಮುನ್ ಶೆನ್ರು
ಕಪ್ಪಂ ತವಿರ್ಕುಂ ಕಲಿಯೇ ತುಯಿಲೆಳಾಯ್
ಶೆಪ್ಪಮುಡೈಯಾಯ್ ತಿರಲುಡೈಯಾಯ್ ಶೆತ್ತಾರ್ಕ್ಕು
ವೆಪ್ಪಂಕೊಡುಕ್ಕುಂ ವಿಮಲಾ ತುಯಿಲೆಳಾಯ್
ಶೆಪ್ಪನ್ನಮೆನ್ ಮುಲೈಚ್ಚೆವ್ವಾಯ್ ಶಿರುಮರುಂಗುಲ್
ನಪ್ಪಿನ್ನೈನಂಗಾಯ್ ತಿರುವೇ ತುಯಿಲೆಳಾಯ್
ಉಕ್ಕಮುಂ ತಟ್ಟೊಳಿಯುಂ ತನ್ದುನ್ ಮಣಾಳನ್ನೈ
ಇಪ್ಪೋದೇ ಎಮ್ಮೈ ನೀರಾಟ್ಟು ಎಲೋರೆಂಬಾವಾಯ್

ಭಾವಾನುವಾದ - ೨೦

*ಪೊಗಲಳವೇ ನಿನ್ನ ಮಹಿಮಾತಿಶಯಗಳನು ಚಿನ್ಮಯನೆ*
*ಮಾಧವನೆ ಯಾದವನೆ ಸಿರಿಯರಸ ಯದುಶೈಲನಾಥ* // ಪ //

ನಿಲುವೆ ನೀನಗ್ರದಲಿ ಸಲಹೆ ಭಕುತರನು ಕಾವ ಗದುಗಿನ ವೀರ
ನಾರಾಯಣನೆ
ಸಹಸ್ರ ಬಾಹುವೆ ಸಹಸ್ರಾಕ್ಷ ಸುರಲೋಕ ರಕ್ಷಕನೆ ಸರ್ವವಿಜ್ಞಯೀ
ಯೋಗನಿದ್ರೆಯ ತಿಳಿದೆದ್ದು ಬಾ ವನಮಾಲಿ ಯದುಶೈಲನಾಥ
ನಿಜಭಕ್ತಿರಸ ಕ್ಷೀರಾಂಬುಧಿ ಸ್ಥನಭಾರೆ ಕಮಲೆ ಕೋಮಲೆ ನೀಳೆ ನಿರ್ಮಲೆ
ಬೇಗೆದ್ದು ಬಾರಮ್ಮ
ಸ್ತುತಿಸಿ ಬಂದಿಹೆವಮ್ಮ ಕ್ಷೀರಸಾಗರ ತನಯೆ ಶ್ರೀ ಮಹಾಲಕ್ಷ್ಮೀ
ಮಂಗಳದ ಮಾರ್ಗಶಿರ ನೋಂಪಿಯೊಳ್ ಬಂದಿಹೆವು ಭಕುತಿಯಲಿ
ಕಲಶ ಕನ್ನಡಿ ಸಹಿತ ಸುಂದರನ ನೆಳ್ಚರಿಸಿ ಸಲಹೆಮ್ಮ ಕಾರುಣ್ಯ
ನಿಧಿಯೇ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು



## ಪಾಶುರ - 20

**ಸಂಕ್ಷಿಪ್ತ ಭಾವಾರ್ಥ**



ಹೀಗೆ ನಾನಾ ಪರಿಯಿಂದ ನೀಳಾದೇವಿಯನ್ನು ಪ್ರಾರ್ಥಿಸಿ, ಶ್ರೀ ಮಹಾಲಕ್ಷ್ಮಿಯನ್ನು ಪ್ರಾರ್ಥಿಸುತ್ತಿದ್ದಾಳೆ ಈ ಪಾಶುರದಲ್ಲಿ.

ಅಮ್ಮಾ ಶ್ರೀ ಮಹಾಲಕ್ಷ್ಮೀ ನೀನು ಜಗನ್ಮಾತೆ ಮಹಾಶಕ್ತಿಮಯಿ. ತ್ರಿಪುರ ಸುಂದರಿ ನೀನು ಕೋಟಿ ದೇವತೆಗಳಿಗೆ ಒಡೆಯಾನಾದ ದಯಾಮಯನಾದ ಬಲಭದ್ರನ ಸೋದರ, ಭಕ್ತರ ಭಕ್ತ, ಅರಿಭಯಂಕರ ವಿಶ್ವವಂದಿತ ಚರಣ, ಕರಿರಾಜ ವರದ, ಭಕ್ತ ಬವದೀಯ ಮುಚುಕುಂದ ವರದ, ಲೀಲಾ ವಿನೋದ ಇಂತೆಲ್ಲಾ ಪರಿಯಲ್ಲಿ ಹಾಡಿ ಹೊಗಳಿಸಿಕೊಳ್ಳುವ ಆ ನೀಲಮೇಘ ಶ್ಯಾಮನನ್ನು ನಿನ್ನ ಹೃತ್ಕಮಲದಲ್ಲಿಟ್ಟುಕೊಂಡಿರುವ ಮಹಿಮಾವಂತಳು ನೀನು.

ನಿನ್ನನ್ನು ಸ್ವಾಮಿಯು ಸದಾಕಾಲ ಆಶ್ರಯಿಸಿರುತ್ತಾನೆ ನಿನ್ನ ಭಕ್ತಿಗೆ ಬಂಧಿಯಾಗಿ.

ಆದ್ದರಿಂದ ಅಮ್ಮಾ ನೀನೂ ಸಹ ನಮ್ಮನ್ನು ಕರುಣಾಕಟಾಕ್ಷದಿಂದ ಈಕ್ಷಿಸಿ ನಮಗೆ ನಿಮ್ಮ ದರ್ಶನ ನೀಡಿ ನಮ್ಮನ್ನುದ್ದರಿಸಬೇಕು.

ಶ್ರೀಕೃಷ್ಣನ ದರ್ಶನದಿಂದ ನಮ್ಮ ವ್ರತವೂ ಈಡೇರಿ, ಸಮಸ್ತ ಲೋಕಕ್ಕೂ ಮಂಗಳವಾಗಲಿ.





## ಪಾಶುರ - ೨೧

ಎತ್ತಕಲಂಗಳೆದಿರ್ ಪೊಂಗಿ ಮೀದಳಿಪ್ಪ
ಮಾತ್ತಾದೇ ಪಾಳ್‌ಶೋರಿಯುಂ ವಳ್ಳಲ್ ಪೆರುಂಪಶುಕ್ಕಳ್
ಆತ್ತ ಪಡೈತ್ತಾನ್ ಮಗನೇ ಅರಿವುರಾಯ್
ಊತ್ತ ಮುಡೈಯಾಯ್ ಪೆರಿಯಾಯ್ ಉಲಗಿನಿಲ್
ತೋತ್ತ ಮಾಯ್ ನಿನ್ರ ಶುಡರೇ ತುಯಿಲೆಳಾಯ್
ಮಾತ್ತಾರುನಕ್ಕು ವಲಿತೊಲೈಂದುನ್ ವಾಶಲ್‌ಕಣ್
ಆತ್ತದು ವಂದುನ್ನಡಿಪಣಿಯುಮಾಪ್ಪೋಲೇ
ಪೋತ್ತಿಯಾಂ ವಂದೋಂ ಪುಗಳಿನ್ದೇಲೋರ್‌ಂಬಾವಾಯ್

### ಭಾವಾನುವಾದ - ೨೧

*ಶ್ರೀರಂಗ ರಂಗ ಕಾವೇಟಿ ರಂಗ ಪಾಲ್ಗಡಲ ಶಯನ ಪದುಮನಾಭ*
*ಏತಕೀ ತಾಮಸವು ನಾವು ನಿನ್ನವರಲ್ಲವೇನೋ ದೇವಕೀ ತನಯನೇ* // ಪ //

ಕಾಮಧೇನುಗಳೊಡೆಯನೆ ಮಹಾನಿಧಿಯೇ ವಾತ್ಸಲ್ಯ ವಾರಿಧಿಯೇ
ಮಾರ್ಗಶಿರ ನೋಂಪಿಯನಾಚರಿಸಿ ಬಂದಿರುವೆಮ್ಮ ಸಲಹಯ್ಯ
ಬೆಳಗಿಹರು ಶಶಿಸೂರ್ಯ ಕೋಟಿಕೋಟಿ ತಾರಾ ಮಂಡಲಾಧಿಪರು
ನೀ ಪರಮ ಪರಮಪುರುಷ ಪರಂಧಾಮ ಜನಕ ಜನನಿ ಚರಾಚರಕೆ
ಸುಪ್ರಭಾತವು ನಿನಗೆ ಯಾದವಾಚಲವಾಸ ಶ್ರೀತುಳಸಿ ವನಮಾಲಿ
ಸುಪ್ರಭಾತವು ನಿನಗೆ ಗರುಡಾದ್ರಿವಾಸ ವಿಶ್ವವಂದಿತ ಚರಣ
ಶ್ರೀಶ್ರೀನಿವಾಸ
ಸಹಿಸಲಾಗದು ನಿನ್ನಗಲಿಕೆಯ ದರ್ಶನವ ನೀಡೆಮಗೆ ಸ್ವಸ್ತಿದಕ್ಷಿಣನೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 21

### ಸಂಕ್ಷಿಪ್ತ ಭಾವಾರ್ಥ

ಇಲ್ಲಿಂದ ಮುಂದೆ ಶರಣಾಗತಿಯನ್ನು ನಾವು ಕಾಣುತ್ತೇವೆ. ಹೇ ಕೃಪಾಸಿಂಧು, ನೀನು ಗೋಕುಲದಲ್ಲಿ ಹುಟ್ಟಿ ಕಾಮಧೇನುಗಳ ಒಡೆಯನೆನಿಸಿ ದುಷ್ಟ ದಾನವರನ್ನೆಲ್ಲ ಕೊಂದು, ನಿನ್ನ ಬಾಲಲೀಲೆಗಳಿಂದ ಲೋಕ ಕಲ್ಯಾಣವನ್ನು ಮಾಡಿದವನು ನೀನು. ಸಕಲರಿಗೂ ಜೀವನಾಧಾರನಾಗಿರುವೆ.

ನೀನು ಯುಗಯುಗಳಲ್ಲಿಯೂ ಧರ್ಮರಕ್ಷಣೆಗಾಗಿ ಅವತಾರ ಮಾಡುತ್ತಾ ಬಂದಿರುವ ಕಮಲನಾಭ ಶ್ರೀಯಃಪತಿ.

ಶಶಿಸೂರ್ಯ ಕೋಟಿ ತಾರಾಮಂಡಲಗಳೂ ನಿನ್ನಿಂದಲೇ ಬೆಳಗುತ್ತಿವೆ. ಭುವನ ಬ್ರಹ್ಮಾಂಡವೆಲ್ಲಾ ನಿನಗೆ ಸುಪ್ರಭಾತವನ್ನು ಹಾಡುತ್ತಿದೆ.

ಓಂಕಾರ ನಾದಮಯವಾಗಿದೆ ಸೃಷ್ಟಿ. ಇಂತಹ ಶುಭ ಮಾರ್ಗಶಿರ ಮಾಸದಲ್ಲಿ ವ್ರತವನ್ನಾಚರಿಸಿ ನಿನಗೆ ಸುಪ್ರಭಾತವನ್ನು ಆಚರಿಸುತ್ತಿದ್ದೇವೆ. ಕಣ್ತೆರೆದು ನೋಡು, ನಿನ್ನ ಯೋಗನಿದ್ರೆಯ ಆಟ ಸಾಕು. ಭಕ್ತರ ಕರೆಗಾಗಿಯೇ ಕಾದು ಕಣ್ಮುಚ್ಚಿಕೊಂಡು ಕುಳಿತಿರುವ ಭಕ್ತಭವದೀಯನಲ್ಲವೇ ನೀನು ? ಕಣ್ತೆರೆದು ನೋಡು. ಬೇಗೆದ್ದು ಬಾ.

ನಿನ್ನನ್ನಗಲಿ ನಮಗೆ ಬದುಕಿಲ್ಲ. ಆದ್ದರಿಂದ ತ್ವರೆಮಾಡಿ ಬಂದು ನಮ್ಮನ್ನು ಕರುಣಿಸು.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೂ ಮಂಗಳವಾಗಲಿ.







## ಪಾಶುರ - ೨೨

ಅಂಗಣ್ ಮಾಜ್ಞಾಲತ್ತರಶರಭಿಮಾನ
ಭಂಗಮಾಯ್ ವಂದು ನಿನ್ ಪಳ್ಳಿಕಟ್ಟಿಲ್‌ಕೀಳ್
ಶಂಗಮಿರಪಾರ್ ಪೋಲ್‌ವನ್ದು ತಲೈಪ್ಪೆಯ್ದೋಂ
ಕಿಂಕಿಣಿವಾಯ್‌ಚ್ಚೆಯ್ದ ತಾಮರೈಪ್ಪೂಪ್ಪೋಲೇ
ಶೆಂಗಣ್‌ಶಿರುಚ್ಚಿರಿದೇ ಯೆಮ್ಮೇಲ್ ವಿಳಿಯಾವೋ
ತಿಂಗಳುಮಾದಿತ್ತಿಯನುಂ ಎಳುನ್ದಾರ್‌ಪೋಲ್
ಅಂಗಣಿರಂಡುಂ ಕೊಣ್ಡೆಂಗಳ್‌ಮೇಲ್ ನೋಕ್ಕುದಿಯೇಲ್
ಎಂಗಳ್‌ಮೇಳ್ ಚ್ಚಾಪಮಿಳಿನ್ದೇಲೋರೆಂಬಾವಾಯ್

## ಭಾವಾನುವಾದ - ೨೨

*ಪೊಗಳಲಳವೇ ನಿನ್ನ ಅಸಮಾನ ವೈಭವ ಪಾರ್ಥಸಾರಥಿಯೇ*
*ಜಗದಾದಿಜನೆ ಜಲಜನಾಭ ಜಲಜಾಕ್ಷ ಚೆಲುವ ನಾರಾಯಣನೆ ಸಿರಿರಮಣ* *॥ ಪ ॥*

ನಮಿಸಿ ನಿಂದಿಹರು ಸುರಗಣಾಧ್ಯಕ್ಷ ಸಹಿತ ತಾರಾಧಿಪರು ಶಿರಬಾಗಿ
ತುಂಬಿಹುದು ರತ್ನಕಾಂತಿ ಬೆಳಗಿ ದ್ವಾರಕಾನಾಥನರಮನೆಯು
ಭಕ್ತಿಯಮುನೆಯೊಳ್ಮಿಂದು ಬಂದಿಹೆವು ಸರ್ವವಿದ್ವಾನು ನಿನ್ನ ದರ್ಶನಕೆ
ಹರಿದು ಬರಲೀ ನಿನ್ನ ಕರುಣೆ ವಿಧುರನಾಲಯದ ಕ್ಷೀರ ಧಾರೆಯಂತೆ
ನೀನೆ ಗತಿ ನೀನೆ ಮತಿ ನೀನೇ ಸಕಲಕೆಲ್ಲಕು ಸನ್ಮಿತ್ರ ಆಧಾರಾಶ್ರಯನು
ಕೋಟಿ ರವಿಕಾಂತಿ ನೇತ್ರ ಕಿಡಿತಾಕಿ ಸುಡಲೆಮ್ಮ ಮೋಹಮದ
ಮಾತ್ಸರ್ಯ
ನೀಡಲೆಮಗಾಹ್ಲಾದ ನಿನ್ನ ಶಶಿಕೋಟಿ ಸಮ ನೇತ್ರ ಶ್ರೀರಂಗರಂಗ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 22

### ಸಂಕ್ಷಿಪ್ತ ಭಾವಾರ್ಥ

ನೋಡು ನಿನ್ನ ದರ್ಶನಕ್ಕೆ ಅನಂತಕೋಟಿ ದ್ವೀಪಗಳಿಂದ ಭೂಮಂಡಲಾಧಿಪರು ಬಂದಿದ್ದಾರೆ. ದೇವಗಣದೊಂದಿಗೆ ಇಂದ್ರನೂ ಸಹ ಕಪ್ಪಕಾಣಿಕೆಗಳನ್ನು ತಂದಿದ್ದಾನೆ. ಇವರ ಕಿರೀಟಗಳಿಂದ ಹೊರಹೊಮ್ಮುತ್ತಿರುವ ಪ್ರಭೆಯಿಂದ ಅರಮನೆಯಲ್ಲಿ ಕೋಟಿ ಸೂರ್ಯರು ಏಕ ಕಾಲದಲ್ಲಿ ಬೆಳಗಿದಂತೆ ಪ್ರಕಾಶಮಾನವಾಗಿದೆ. ಹೇ ಮಾಧವ ಮಧುಸೂಧನ, ನೀನು ಭಕ್ತರಿಗೆ ಭಕ್ತ. ಅಂದೊಮ್ಮೆ ನೀನು ವಿಧುರನ ಮನೆಗೆ ಹೋದಾಗ ವಿಧುರ ನಿನ್ನ ಭಕ್ತಿಯಲ್ಲಿ ಮುಳುಗಿ ಬಾಳೆಹಣ್ಣನ್ನು ಬಿಡಿಸಿ ಸಿಪ್ಪೆಯನ್ನೇ ನಿನಗೆ ಕೊಟ್ಟಾಗ ಆನಂದದಿಂದ ನೀನು ಆ ಸಿಪ್ಪೆಯನ್ನೇ ತಿಂದು ವಿಧುರನಿತ್ತ ಹಾಲನ್ನು ಕುಡಿದು, ಹಸ್ತಿನಾವತಿಯ ಬೀದಿ ಬೀದಿಗಳಲ್ಲಿ ಹಾಲಿನ ಹೊಳೆಯನ್ನೇ ಹರಿಸಿ ನಿನ್ನ ಭಕ್ತ ಪರಾಕಾಷ್ಠೆಯನ್ನು ಮೆರೆದವನು.

ಅಂತೇಯೇ ನೀನಂದು ಹರಿಸಿದ ಕ್ಷೀರಧಾರೆಯಂತೆ ಇಂದು ನಿನ್ನ ಕರುಣೆಯ ಧಾರೆಯನ್ನು ನಮ್ಮ ಕಡೆ ಹರಿಸು. ನಾವುಗಳೆಲ್ಲಾ ಭಕ್ತಿ ಶ್ರದ್ಧೆಗಳಿಂದ ಕೂಡಿದವರಾಗಿ, ಕೊರೆಯುವ ಚಳಿಯನ್ನೂ ಲೆಕ್ಕಿಸದೇ ಭಕ್ತಿಯಮುನೆಯಲ್ಲಿ ಮಿಂದು ನಿನ್ನ ದರ್ಶನಕ್ಕಾಗಿ ಬಂದಿದ್ದೇವೆ.

ಬದುಕೆಂಬ ಈ ಜೀವಜಗತ್ತಿನ ಮಹಾಸಾಗರವನ್ನು ದಾಟಿಸಿ ನಮ್ಮನ್ನು ಉದ್ಧರಿಸು.

ನಿನ್ನ ರವಿಕೋಟಿತೇಜದ ಕಣ್ಣುಗಳಿಂದ ಬರುವ ಪ್ರಭೆಯು ನಮ್ಮೆಲ್ಲ ಜನುಮಜನುಮಗಳ ಮೋಹಮದ ಮಾತ್ಸರ್ಯಗಳನ್ನು ದಹಿಸಲಿ. ಶಶಿಕೋಟಿ ತೇಜದ ಬೆಳಕಿನಿಂದ ನಮಗೆ ಆಹ್ಲಾದವನ್ನುಂಟುಮಾಡಲಿ.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತ ಲೋಕಕ್ಕೂ ಮಂಗಳವಾಗಲಿ.





## ಪಾಶುರ - ೨೩

ಮಾರಿಮಲೈ ಮುಳಿಂಜಿಲ್ ಮುನ್ನಿಕ್ಕಿಡಂದುರಂಗುಂ
ಶೀರಿಯ ಶಿಂಗಂ ಅರಿವುತ್ತು ತ್ತೀವಿಳಿತ್ತು
ವೇರಿಮಯಿರ್ ಪೊಂಗ ವೆಪ್ಪಾಡುಂ ಪೇರ್‍ನ್ದುದರಿ
ಮೂರಿ ನಿಮಿರ್‍ನ್ದು ಮುಳಂಗಿ ಪ್ಪುರಪಟ್ಟು
ಪೋದರುಮಾಪೋಲೇ ನೀ ಪೂವೈಪ್ಪೂವಣ್ಣಾ ಉನ್
ಕೋಯಿಲ್ ನಿನ್ರಿಂಗನೇ ಪೋಂದರುಳಿ ಕೋಪ್ಪುಡೈಯ್
ಶೀರಿಯ ಶಿಂಗಾಶನತ್ತಿರುನ್ದು ಯಾಂ ವಂದ
ಕಾರಿಯಂಆರಾಯನ್ದು ಅರುಳೇಲೋರೆಂಬಾವಾಯ್

ಭಾವಾನುವಾದ - ೨೩

*ಪಾಡುವೆವು ಪ್ರೇಮದಲಿ ಬೇಡುವೆವು ಭಕುತಿಯಲಿ ಭಕ್ತ ಬಾಂಧವನೆ*
*ಭಕ್ತ ಭವದೀಯ ಭಕ್ತವತ್ಸಲ ಹರಿಯೇ ಶ್ರೀ ಮುಕುಂದಾ* *// ಪ //*

ಸಿಂಹಪೀಠವನೇರಿ ನಮ್ಮೆಡೆಗೆ ನೋಡಿ ಬಂದಿಹಿರೇನೆಂದು ಬೆಸಸಿದೊಡೆ
ಭಾಗ್ಯೋಧಯವೆಮಗೆಂದು ನಲಿಯುವೆವು ಪ್ರಾಣಜೀವವನೆ
ನಿಜಭಕ್ತನನು ಸೇವಿಸುತ ಸತಿಯರೊಡಗೂಡಿ ಮೆರೆದೆ ನೀನತಿಶಯದಿ
ಪುಂಡರೀಕ ವರದ ನೀನಾದೆ ಸಾರಥಿಯಾದೆ ಕೃಷ್ಣೆಯಳಲನು ನೀಗಿಸುತ
ಮಣ್ಣು ತಿನ್ನುವ ನೆಪದಿ ನೀತೋರ್ದೆ ಬಾಯಲ್ಲಿ ಬ್ರಹ್ಮಾಂಡ
ಸಿಂಹಪೀಠದಿಂದೆಮ್ಮೆಡೆಗೆ ನೋಡುತೆಮ್ಮನು ಬೆಸಸೊಲುಮೆಯಲಿ
ಹೇಮಪುರಿಗೊಡೆಯ ಪೊಡವಿಪಾಲನೆ ಪುಣ್ಯಶ್ರವಣಕೀರ್ತನನೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ ..
ಮುಂಬೆಳಕು





## ಪಾಶುರ - 23

**ಸಂಕ್ಷಿಪ್ತ ಭಾವಾರ್ಥ**

ಹೇ ಜಗನ್ನಾತ, ನೀನು ಬರುತ್ತಿದ್ದರೆ, ಅನಂತಕೋಟಿ ರಾಯರ್ಗಳೂ ತಲೆ ತಗ್ಗಿಸಿ ನಿಲ್ಲುತ್ತಾರೆ. ನೀನು ಸಿಂಹಪೀಠದಲ್ಲಿ ಕುಳಿತು ಎಲ್ಲರೆಡೆಗೆ ಒಮ್ಮೆ ಕಣ್ಣು ಹಾಯಿಸಿದರೆ ಸಾಕು ತಾವು ಧನ್ಯರೆಂದುಕೊಳ್ಳುತ್ತಾರೆ. ಹೇ ಕೃಪಾನಿಧಿ, ನಾವೂ ಸಹ ನಿನ್ನೊಂದು ಕೃಪಾಕಟಾಕ್ಷಕ್ಕಾಗಿ ಧನುರ್ಮಾಸದ ಚಳಿಯಲ್ಲಿ ಯಮುನೆಯಲ್ಲಿ ಮಿಂದು ನಿನ್ನ ಧ್ಯಾನ ಮಾಡುತ್ತಾ ಕೇವಲ ಭಕ್ತಿರಸ ಪಾನದಿಂದ ಬಂದಿದ್ದೇವೆ. ಆಳ್ವಾರರೂ ತಿರುನಾಮಗಳಿಂದ ಶೋಭಿತರಾಗಿ ನಾಲಾಯಿರ ಪ್ರಬಂಧ ಪಾರಾಯಣ ಮಾಡುತ್ತಿದ್ದಾರೆ.

ಮುಕುಂದಾ, ನೀನು ಸುಧಾಮನಿಗೆ ಒಲಿದು ಆತನ ಪಾದಪೂಜೆಯನ್ನು ಸತಿಯರೊಡಗೂಡಿ ಮಾಡಿ ನಿನ್ನ ಕೀರ್ತಿಯನ್ನು ಹೆಚ್ಚಿಸಿಕೊಂಡೆ. ಭಕ್ತ ಪುಂಡರೀಕನಿಗೆ ಒಲಿದು ಭೀಮಾ ನದಿಯ ತಟದಲ್ಲಿ ಭಕ್ತರಿಗೆ ಭವಬಂಧನದಿಂದ ಪಾರುಮಾಡಲು ಕಟಿಬದ್ಧನಾಗಿ ಕಟಿಯಲ್ಲಿ ಕರವಿಟ್ಟು ನಿಂತವನು ನೀನು. ಮಣ್ಣು ತಿನ್ನುವ ನೆಪದಲ್ಲಿ ತಾಯಿಗೆ ಬಾಯಲ್ಲಿ ಬ್ರಹ್ಮಾಂಡವನ್ನು ತೋರಿಸಿ ಭಯ ಹುಟ್ಟಿಸಿ, ಮತ್ತೆ ತಾಯ ಮಡಿಲಲ್ಲಿ ಏನೂ ಅರಿಯದ ಕಂದಮ್ಮನಂತೆ ನಲಿದ ಲೀಲಾ ವಿನೋದಿ. ತಂಗಿ ದ್ರೌಪದಿ ಅನಾಥರಕ್ಷಕಾ, ಅಣ್ಣಾ ಎಂದು ಕರೆದಾಗ ಅಕ್ಷಯ ವಸನವನ್ನು ನೀಡಿ ಪಾರ್ಥಸಾರಥಿಯಾಗಿ ದುಷ್ಟ ಸಂತಾನವನ್ನೇ ನಾಶಮಾಡಿದ ಭಕ್ತರನ್ನು ಉಳಿಸಿಕೊಂಡ ವಿಶ್ವರೂಪಿ ನೀನು. ನಿನ್ನದು ಅನಂತ ಅವತಾರಗಳು. ಅವುಗಳನ್ನು ವರ್ಣಿಸಲು ಆದಿಶೇಷನಿಗೂ ಅಸಾಧ್ಯ. ಇನ್ನು ನಾವು ವರ್ಣಿಸಲು ಸಾಧ್ಯವೇ ?

ನಂದ ನಂದನ ನೀನು ಕರುಣಾಳು. ಕರುಣಾಳು ಬಾ ಬೆಳಕೆ ಕೈ ಹಿಡಿದು ನಡೆಸೆಮ್ಮ ಈ ಇರುಳ ಬಾಳಿನಲಿ.

ಇದರಿಂದ ನಮ್ಮ ವ್ರತವೂ ಈಡೇರಿ ಸಕಲ ಲೋಕಕ್ಕೂ ಮಂಗಳವಾಗಲಿ.





## ಪಾಶುರ - ೨೪

ಅನ್ರಿವ್ವಲಹಮಳಂದಾಯ್ ಅಡಿಪೋತ್ತಿ
ಶೆನ್ರುಂಗುತ್ತೆನ್ನಿಲಂಗೈ ಶೆತ್ತಾಯ್ ತಿರಳ್‌ಪೋತ್ತಿ
ಪೊನ್ರಚ್ಚಕಡಮುದೈತ್ತಾಯ್ ಪುಗಳ್‌ಪೋತ್ತಿ
ಕನ್ರು ಕುಣಿಲಾವೆರಿಂದಾಯ್ ಕಳಲ್‌ಪೋತ್ತಿ
ಕುನ್ರು ಕುಡೈಯ್‌ಮಾ ಎಡುತ್ತಾಯ್ ಗುಣಂ ಪೋತ್ತಿ
ವೆನ್ರುಪಗೈ ಕೆಡುಕ್ಕುಂ ನಿನ್ ಕೈಯಿಲ್ ವೇಲ್‌ಪೋತ್ತಿ
ವೆನ್ರನ್ರುನ್ ಶೇವಕಮೇ ಯೇತ್ತಿಪ್ಪರೈಕೊಳ್ವಾನ್
ಇನ್ರುಯಾಂ ವನ್ದೋಂ ಇರಂಗೇಲೋರೆಂಬಾವಾಯ್

ಭಾವಾನುವಾದ - ೨೪

*ಪಾಡುತಾಡುತ ಬಂದಿಹೆವು ತಾಳ ದಂಡಿಗೆ ಪಿಡಿದು ನಿನ್ನ ದರುಶನಕೆ*
*ಕಟ್ಟಿ ಕಾಲ್ಗೆಜ್ಜೆ ಕುಣಿಕುಣಿದಾಡಿ ಬಂದಿಹೆವು ನಿನ್ನಪಾದ ದರುಶನಕೆಂದು* *// ಪ //*

ಮಂಗಳವು ವಾಮನಗೆ ಮಂಗಳವು ಸಿರಿಪಾದಕ್ಕೆ ಶ್ರೀಶ್ರೀನಿವಾಸಗೆ
ಮಂಗಳವು ದಶಕಂಠ ಮರ್ಧನಗೆ ಗೌತಮ ಗಿರಿನಿಲಯ ದಶರಥಾತ್ಮಜಗೆ
ಮಂಗಳವು ಪೂತನೀ ಶಕಟಾಸುರ ಸಂಹಾರ ಕಾಳಿಂಗ ಮರ್ಧನಗೆ
ಮಂಗಳವು ಪಾಂಡು ತನಯರ ಬೆಂಬಿಡದೆ ಕಾಯ್ದವಗೆ ಕಾವೇಟಿರಂಗನಿಗೆ
ಮಂಗಳವು ಯೋಗಿಜನ ವಂದಿತಗೆ ಭೂತಭವ್ಯ ಭವನ್ನಾಥಗೆ
ಶುಭಮಂಗಳವು
ಎಂದಾಡಿ ನೋಂಪಿಯನಾಚರಿಸಿ ಬಂದಿಹೆವು ನಿನ್ನ ದರುಶನಕೆ
ಗೀತಗೋವಿಂದ
ಅಭಯ ಹಸ್ತವ ತೋರುತೆಮ್ಮನು ಸಲಹೋ ದೇವಕೀತನಯನೇ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 24

**ಸಂಕ್ಷಿಪ್ತ ಭಾವಾರ್ಥ**

ದೇವತೆಗಳ ಕಾರ್ಯಕ್ಕಾಗಿ ಬಲಿಯಲ್ಲಿ ಮೂರಡಿ ಜಾಗವನ್ನು ಬೇಡಿ ಮೂರು ಲೋಕಗಳಿಗೂ ಬೆಳೆದು ನಿಂತ ವಾಮನನೇ ನಿನಗೆ ಮಂಗಳ. ದಶಶಿರನನ್ನು ಲೀಲಾಜಾಲವಾಗಿ ಸಂಹರಿಸಿದ ದಶರಥಾತ್ಮಜನೆ ನಿನಗೆ ಮಂಗಳ. ಪೂತನೀ ಶಕಠಾಸುರರಾದಿ ರಾಕ್ಷಸರನ್ನು ಸಂಹರಿಸಿದ ಬಾಲಗೋಪಾಲನೇ ನಿನಗೆ ಮಂಗಳ. ಕೋಪದಿಂದ ಇಂದ್ರನು ಆರ್ಭಟಿಸಿ ಭಯಂಕರವಾಗಿ ಮಳೆಯನ್ನು ಸುರಿಸಿದಾಗ ಗೋವರ್ಧನ ಗಿರಿಯನ್ನು ನಿನ್ನ ಕಿರುಬೆರಳಿನಿಂದ ಎತ್ತಿ ಭಕ್ತರನ್ನು ರಕ್ಷಿಸಿಕೊಂಡವನೇ ನಿನಗೆ ಮಂಗಳ. ಶಿಶುಪಾಲ ದಂತವಕ್ತ್ರರರನ್ನು ಸಂಹರಿಸಿ ರಾಜಸೂಯ ಯಾಗವನ್ನು ಯಾವ ಅಡೆತಡೆಗಳೂ ಇಲ್ಲದಂತೆ ನಡೆಸಿಕೊಟ್ಟ ಚಕ್ರರಾಜನೇ ನಿನಗೆ ಮಂಗಳ ಧರ್ಮನಂದನನ ಹೃತ್ಕಮಲವಾಸನೇ ನಿನಗೆ ಮಂಗಳ.

ಯೋಗಿಗಳು ಸದಾಕಾಲ ತಮ್ಮ ಹೃದಯದಲ್ಲಿ ಬೆಳಗಿಸಿಕೊಂಡಿರುವ ಮಹಿಮಾಂತರಂಗನೇ ಯೋಗಿಜನೇಶ್ವರನೇ ನಿನಗೆ ಮಂಗಳ. ಕಂಸಚಾಣೂರರಾದಿ ಮಲ್ಲರನ್ನೆಲ್ಲ ಮರ್ದಿಸಿದ ದೇವಕೀತನಯನೇ ನಿನಗೆ ಮಂಗಳ. ಸಪ್ತಗಿರಿವಾಸ ಭಕ್ತ ಬಾಂಧವನೇ ಹೇ ತಿರುವೇಂಕಟೇಶನೇ, ನಿನಗೆ ಮಂಗಳ.

ಚೆಲುವ ಚೆನ್ನಿಗನಾಗಿ ಬೀಬಿನಾಚಾರ್ಯರು ಹೃದಯೇಶ್ವರನಾದ. ಯದುಶೈಲನಾಥನೇ ನಿನಗೆ ಮಂಗಳ ಕಾಳಿಂಗಸರ್ಪವನ್ನು ಮರ್ದಿಸಿದ ರಾಧಾರಮಣನೇ ನಿನಗೆ ಮಂಗಳ.

ದೇವಾದಿದೇವನೆ, ಮಂಗಳ ಮಾರ್ಗಶಿರ ಮಾಸದ ವ್ರತವನ್ನು ಆಚರಿಸಿ ನಿನ್ನ ದರ್ಶನಾರ್ಥಿಗಳಿಗಾಗಿ ಬಂದಿರುವ ನಮಗೆ ಅನುಗ್ರಹಿಸಿ ಉದ್ಧರಿಸು.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೂ ಮಂಗಳವಾಗಲಿ.





## ಪಾಶುರ - ೨೫

ಒರುತ್ತಿ ಮಹನಾಯ್ ಪ್ಪಿರಂದೋರಿರವಿಲ್
ಒರುತ್ತಿ ಮಹನಾ ವಳಿತ್ತು ವಳರ
ತರಿಕ್ಕಿಲಾನಾಹಿತ್ತಾನ್ ತೀಂಗು ನಿನ್ನೈಂತ
ಕರುತ್ತೈ ಪ್ಪಿಳ್ಳೈಪ್ಪಿತ್ತು ಕಂಜನ್ ವಯಿತ್ತಿಲ್
ನೆರುಪ್ಪೆನ್ನ ನಿನ್ರ ನೆಡುಮಾಲೆ ಮುನ್ನೈ
ಆರುತ್ತಿತ್ತು ವಂದೋಂ ಪರೈ ತರುದಿಮಾಗಿಲ್
ತಿರುತ್ತಕ್ಕ ಶೆಲ್ವಮುಂ ಶೇವಕಮುಂ ಯಾಮ್ ಪಾಡಿ
ವರುತ್ತಮುಂ ತೀರ್ನ್ದು ಮಹಿಳ್ನ್ದೇಲೋರೆಂಬಾವಾಯ್

## ಭಾವಾನುವಾದ - ೨೫

*ಎಷ್ಟೆಷ್ಟು ಪಾಡಿಪೊಗಳಿದರೂ ಸರಿ ದಣಿವಿಲ್ಲವೀ ಮನಕೆ*
*ಮತ್ತಷ್ಟು ಪಾಡಬೇಕೆಂಬಾಸೆ ತಾಮಸವ ಮಾಡದಿರಯ್ಯ ಕೃಷ್ಣಯ್ಯ* *// ಪ //*

ಅಣ್ಣ ದುರ್ಗೆಗೆ ನೀನತಿಶಯದಿ ಇರಲು ಬಲಭದ್ರ ನಿನಗಣ್ಣನಾಗಿ
ಬೆಳೆದೆ ನೀ ಗೋಕುಲದಿ ನಂದನಂದನನಾಗಿ ದೇವಕೀತನಯ
ಹಚ್ಚಿ ಕಿಚ್ಚನು ಕಂಸನೆದೆಯಲ್ಲಿ ಕೊಂದೆ ನೀನಸುರರನು ಅನಿರುದ್ದನೇ
ಪಾಡಲಳವೇ ನಿನ್ನನಂತ ಗುಣಗಾನ ಸಿರಿಗೋದೆಯರಸನೇ ಗೋಪಾಲ
ಸನಕ ಸನಂದಾದಿ ಮುನಿವಂದಿತಾ ಚರಣ ತಿರು ಶೆಲ್ವ ನಾರಾಯಣೇ
ಪಾಲ್ಬೆಣ್ಣೆ ಕದ್ದ ಮುದ್ದು ಶಿಶು ನೀ ಮಾತೆ ಯಶೋದೆಗೆ ಗೋಕುಲದಿ
ಅಮರ ವಂದಿತಾ ಚರಣ ನೀ ಕಂದ ಮಾತೆ ದೇವಕಿಗೆ ನಿನ್ನ ಸಿರಿಪಾದ
ತೋರೆಮಗೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ
ಮುಂಬೆಳಕು





## ಪಾಶುರ - 25

### ಸಂಕ್ಷಿಪ್ತ ಭಾವಾರ್ಥ

ಹೇ ಅನಂತಶಯನ, ನಿನ್ನನ್ನು ಅರ್ಥಮಾಡಿಕೊಳ್ಳಲು ಯಾರಿಗೆ ತಾನೇ ಸಾಧ್ಯ ? ಭಯಂಕರವಾಗಿ ಮಳೆಯು ಸುರಿಯುತ್ತಿದ್ದ ನಟ್ಟನಡುರಾತ್ರಿ ದೇವಕೀ ಕಂದನಾಗಿ ಲೋಕ ಕಲ್ಯಾಣಕ್ಕಾಗಿ ಸೆರೆಮನೆಯಲ್ಲಿ ಜನಿಸಿದೆ. ಗೋಕುಲದಲ್ಲಿ ನಂದಯಶೋದೆಯರ ಕಣ್ಮಣಿಯಾಗಿ ಬೆಳೆದೆ.

ದುರ್ಗೆಯು ನಿನಗೆ ತಂದಿಯಾಗಿ, ಅನಂತನೇ ನಿನಗೆ ಅಣ್ಣನಾಗಿ ಜನ್ಮವೆತ್ತಿ ಬಂದು ನಿನಗೆ ಧರ್ಮ ಸಂಸ್ಥಾಪನೆಯ ಕೆಲಸದಲ್ಲಿ ನೆರವಾಗಿದ್ದಾರೆ. ನೀನು ಕಂಸನ ಎಲ್ಲ ರಾಕ್ಷಸ ಸೇವಕರನ್ನೂ ಸಂಹಸಿರಿ ಪವಾಡಗಳ ಶಿಶುವಾಗಿ ಕಂಸನ ಎದೆಯಲ್ಲಿ ನಡುಕವನ್ನುಂಟುಮಾಡಿ, ನಿನ್ನ ಬಾಲ ಲೀಲಾ ವಿನೋದಗಳಿಂದ ಜಗತ್ತನ್ನೇ ಅಚ್ಚರಿಗೊಳಿಸಿದೆ. ನೀನು ವರ್ಣನಾತೀತ.

ನೋಡು ಸುರಲೋಕದಿಂದ ಸುರರೆಲ್ಲ ನಾರದರೊಡಗೂಡಿ ನಿನ್ನ ಧ್ಯಾನದಲ್ಲಿ ಲೀನರಾಗಿ ನಿಂತಿದ್ದಾರೆ. ಹೇ ಅಚ್ಯುತ, ಅನಂತ, ಅನಂತಾನಂತ, ನೀನು ಕಂದ ಮಾತೆ ದೇವಕಿಗೆ. ಪಾಲ್ಬೆಣ್ಣೆ ಕದ್ದ ಕಳ್ಳ ಕೃಷ್ಣ ನೀ ಮಾತೆ ಯಶೋಧೆಗೆ. ಎಂತಹ ಲೀಲಾ ವಿನೋದಿ ನೀನು ?

ಸಕಲ ಚರಾಚರಕ್ಕೂ ನೀನೇ ಸೂತ್ರಧಾರನಾಗಿದ್ದೀಯ. ನಿನ್ನನ್ನೇ ನಂಬಿ ನಾವುಗಳು ವ್ರತವನ್ನಾಚರಿಸಿ ಬಂದಿದ್ದೇವೆ. ನೀನು ನಮಗೆ ಪ್ರೇಮದಿಂದ ಇಹಪರ ಸಾಧನೆಯ ವರಗಳನ್ನು ಕೊಟ್ಟು ಸಲಹು. ನಮ್ಮನ್ನು ಜೀವನ್ಮುಕ್ತರನ್ನಾಗಿಸು.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೂ ಮಂಗಳವಾಗಲಿ.





## ಪಾಶುರ - ೨೬

ಮಾಲೇ ಮಣಿವಣ್ಣಾ ಮಾರ್ಗಳಿಲ್ ನೀರಾಡುವಾನ್
ಮೇಲೈಯಾರ್ ಶೆಯ್‌ವನಗಳ್ ವೇಂಡುವನ ಕೇಟ್ಟಿಯೇಲ್
ಜ್ಞಾನತ್ತೈಯೆಲ್ಲಾಂ ನಡುಂಗ ಮುರಲ್ವನ
ಪಾಲನ್ನವಣ್ಣತ್ತುನ್ ಪಾಂಚಶನ್ನಿಯಮೇ
ಪೋಲ್ವನ ಶಂಗಗಂಳ್ ಪೋಯ್ಪಾಡುಡೈಯನವೇ
ಶಾಲಪ್ಪೆರುಂ ಪರೈಯೇ ಪಲ್ಲಾಂಡಿಶೈಪ್ಪಾರೇ
ಕೋಲವಿಳಕ್ಕೇ ಕೊಡಿಯೇ ವಿತಾನಮೇ
ಆಲಿನಿಲೈಯಾಯ್ ಅರುಳೇಲೋರೆಂಬಾವಾಯ್

### ಭಾವಾನುವಾದ - ೨೬

*ಬೇಡುವೆವು ನಾವ್ ನಿನ್ನ ತಪ್ಪದೆಯೇ ಸಲಿಸೆಮ್ಮ ಕೋರಿಕೆಗಳನೆಲ್ಲ*
*ಸುಧಾಮ ಹೃತ್ಕಮಲವಾಸ ಕೃಷ್ಣೆಯಣ್ಣನೆ ಶ್ರೀ ಮುಕುಂದ ಶ್ರೀ ಮುಕುಂದಾ* // ಪ //

ಮಾರ್ಗಶಿರದುದಯದಲಿ ಯಮುನೆಯೊಳ್ಮೀಯಲೆಮಗೆ ನೆರವಾಗು
ನೀಡೆಮಗೆ ಧ್ವಜಪತಾಕೆಗಳ ಪಾಂಚಜನ್ಯ ಸಾರಂಗ ವಂದಿ ಮಾಗಧರನ್ನು
ಕಳುಹೆಮಗೆ ಭೋರ್ಗರೆವ ಭೇರಿ ಮೃದಂಗ ಬರಲಿ ಭಕ್ತಜನ ತಾಳವಾದ್ಯ ಸಹಿತೆಲ್ಲ
ಇರಲೆಮಗೆ ವಿಷ್ಣುಚಿತ್ತರ ಸನ್ನಿಧಿ ನರಸಿಭಗತ ಮೀರಾ ಪಾಡುತಾಡುತ ಬರಲೀ
ಗಂಗೆ ಯಮುನೆಯರ ಸಿಂಧುಕಾವೇರಿ ಭೀಮಭದ್ರೆಯರ ಸಲಿಲದಲಿ
ಮೊಳಗಲೋಂಕಾರನಾದ ಮೂಡಿ ಬರಲೀ ತುಕಾನಾಮಸಖರಾ ಅಭಂಗನಾದ ಸುಧೆ
ತುಂಬಿರಲಾನಂದ ಸಿರಿಸಂಪದವು ನಿನ್ನ ಭಕುತರಾ ಮನಮನದಿ ಅಕ್ಷಯವಾಗಿ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ ಮುಂಬೆಳಕು





## ಪಾಶುರ - 26

**ಸಂಕ್ಷಿಪ್ತ ಭಾವಾರ್ಥ**

ಹೇ ನಾಥ ನಾರಾಯಣ, ನಾವುಗಳೆಲ್ಲರೂ ನಿನ್ನ ಅನುಚರರು, ಭಕ್ತರು. ನಿನ್ನನ್ನೇ ಆಶ್ರಯಿಸಿರುವವರು. ಆದ್ದರಿಂದ ಕೆಲವು ವಿಶೇಷ ಸವಲತ್ತುಗಳನ್ನು ನೀನು ನಮಗೆ ಕೊಡಬೇಕು.

ಅವುಗಳಾವುವೆಂದರೆ, ನಾವು ಮಾರ್ಗಶಿರ ಮಾಸದಲ್ಲಿ ಮಂಗಳ ಮಜ್ಜನಕ್ಕೆಂದು ಯಮುನೆಯೆಡೆದೆ ಹೋಗುತ್ತಿದ್ದೇವೆ. ನಮಗೆ ಈ ಸಮಯದಲ್ಲಿ ಬೇರಾವ ಚಿಂತೆಯೂ ಕಾಡದಂತೆ ಸದಾಕಾಲ ನಿನ್ನ ಅಮರ ಗುಣಗಾನ ಮಾಡುವ ವಂದಿಮಾಗಧರನ್ನು ಕಳುಹಿಸಿಕೊಡು. ಲೋಕಕ್ಕೆಲ್ಲಾ ತಿಳಿಯಲಿ ನಿನ್ನ ಭಕ್ತರಿಗೆ ನೀನು ಏನೆಲ್ಲಾ ಕರುಣಿಸುತ್ತೀಯೆಂದು.

ಜೊತೆಗೆ ನಮಗೆಲ್ಲಾ ಪಿತೃಸಮಾನರಾದ ನಿನ್ನನ್ನೇ ತಮ್ಮ ಹೃತ್ಕಮಲದಲ್ಲಿ ಹಿಡಿದಿಟ್ಟುಕೊಂಡಿರುವ ಪೆರಿಯಾಳ್ವಾರರೂ ನಿನ್ನ ಅಮರ ಗುಣಗಾನ ಮಾಡಿ ಕಾಲಿಗೆ ಗೆಜ್ಜೆಕಟ್ಟಿ ಆಡಿಪಾಡಿ ನಲಿಯುತ್ತ, ತಾಳ ದಂಡಿಗೆ ಪಿಡಿದು ಮನಮರೆತು ಪಾಡುತ್ತಿರುವ ಭಕ್ತ ವೃಂದವೂ ಸಹ ನಮ್ಮೊಡನಿರುವಂತೆ ಅನುಗ್ರಹಿಸು.

ನರಸೀಭಗತ, ಮೀರಾ ಮಂತಾದ ಭಕ್ತ ಶ್ರೇಷ್ಠರನ್ನು ಬರುವಂತೆ ಮಾಡು. ಎಲ್ಲೆಲ್ಲೂ ಪ್ರಕೃತಿ ಹಸಿರು ಸಿಂಗರದಿಂದ ಕಂಗೊಳಿಸಲಿ. ನಿನ್ನನ್ನು ಪಾಡುತ್ತಾ ನಡೆಯುವ ನಿನ್ನ ಭಕ್ತರ ದಾರಿಯಲ್ಲಿ ಹೂವ ನಡೆಮುಡಿ ಹಾಸಿರಲಿ. ಇದರಿಂದಾಗಿ ನಮಗೆ ನಿನ್ನ ಬಗ್ಗೆ ಇನ್ನೂ ಹೆಚ್ಚು ಪ್ರೀತಿಯುಂಟಾಗಲಿ. ನಿನ್ನ ಭಕ್ತ ಸಮೂಹ ನಿನ್ನ ಗುಣಗಾನ ಮಾಡುತ್ತಾ ಸ್ನಾನಕ್ಕೆ ಇಳಿದಾಗ ಗಂಗೆ ಯಮುನೆ ಸಿಂಧು ಕಾವೇರಿ ಬ್ರಹ್ಮಪುತ್ರಾ ಅಲಕನಂದ ತುಂಗಭದ್ರೆ ಭೀಮಾದಿ ನದಿಗಳಲ್ಲಿ ನಿನ್ನ ನಾಮಾಮೃತವು ತೇಲಿತೇಲಿ ಬರುತ್ತಿರಲಿ.

ಹೀಗೆ ನೀನು ನಮ್ಮನ್ನು ಅನುಗ್ರಹಿಸಿ ರಕ್ಷಿಸು.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತ ಲೋಕಕ್ಕೂ ಮಂಗಳ ಉಂಟಾಗಲಿ.



## ಪಾಶುರ - ೨೭

ಕೂಡಾರೈವೆಲ್ಲುಂ ಶೀರ್‌ಗೋವಿಂದಾ ಉನ್ತನ್ನೈ
ಪ್ಪಾಡಿಪರೈಗೊಂಡು ಯಾಂ ಪೆರುಶಮ್ಮಾನಂ
ನಾಡು ಪುಹಳುಂ ಪರಿಶಿನಾಲ್ ನನ್ರಾಹ
ಶೂಡಹಮೇ ತೋಳ್ವಳೈಯೇ ತೋಡೇ ಶೆವಿಪ್ಪೂವೇ
ಪಾಡಗಮೇ ಯೆನ್ರನಯ ಪಲ್ಕಲನುಂ ಯಾಂ ಅಣಿವೋಂ
ಆಡೈಯುಡುಪ್ಪೋಂ ಅದನ್ಪಿನ್ನೇ ಪಾಲ್ಶೋರ
ಮೂಡ ನೆಯ್ ಪೆಯ್‌ದ್ ಮುಳಂಗೈವಳಿವಾರ
ಕ್ಕೂಡಿಯಿರಂದು ಕುಳಿರ್ನ್ದೇಲೋರೆಂಬಾವಾಯ್

ಭಾವಾನುವಾದ - ೨೭

*ಕೋರುವೆವು ನಾವ್ ನಿನ್ನ ಬೇಡುವೆವು ಪ್ರೇಮದಲಿ ಕಾಮಧೇನುವು ನೀನು*
*ಕೋರಿಕೆಗಳ ಸಲಿಸಯ್ಯ ಪದುಮನಾಭನೆ ಪಾಲ್ಗಡಲ ಶಯನನೇ ಶ್ರೀನಿಧಿಯೇ* // ಪ //

ಇರಲಿ ನಿನ್ನೊಲವಿನಾಸರೆ ನಮಗೆ ನೀನನಾಥ ಬಂಧು ಧರಣೀಧರನೆ
ಗೋವಿಂದಾ
ನೀನೊಲಿದ ನಂತರವೇ ಧರಿಸುವೆವು ನಾವ್ ಸಕಲಾಭರಣದುಡಿಗೆ
ತೊಡುಗೆಗಳನು
ಸಂತಸದಿ ಭುಜಿಸುವೆವು ನೀನಿತ್ತ ಪಾಲ್ಬೆಣ್ಣೆ ಮೊಸರು ಹಾಲೋಗರವ
ಯದುಶೈಲಪತೇ
ಮಾರ್ಗಶಿರ ನೋಂಪಿಯನಾಚರಿಸಿ ಬಂದಿಹರೆಲ್ಲ ಆಳ್ವಾರರುಗಳು
ಪಾಡಿಹರು ನಾಲಾಯಿರ ಪ್ರಬಂಧ ಮಾಲೆಗಳನತಿಶಯದಿ ಭಕುತಿಯಲಿ
ಸ್ವೀಕರಿಸು ಪಾಲ್ಬೆಣ್ಣೆ ಮೇಣ್ ಮೊಸರು ಹಾಲೋಗರವ ಪ್ರೇಮದಲಿ
ವಿಧುರನಾ ಕುಲದೈವ ಹೇಮಪುರಿ ನಿಲಯ ಕೊಳಲ ಗೋಪಾಲ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ ಮುಂಬೆಳಕು





## ಪಾಶುರ - 27

**ಸಂಕ್ಷಿಪ್ತ ಭಾವಾರ್ಥ**

ಹೇ ಜಗನ್ನಾಥ ನಿನ್ನನ್ನೇ ಆಶ್ರಯಿಸಿ ಬಂದಿರುವ ದೀನಾರ್ಥಿಗಳು ನಾವು. ನೀನು ದೀನಜನಬಂಧು ಎಂಬ ಹೆಸರನ್ನು ಪಡೆದಿರುವವನು. ಸನಾತನ, ಸಕಲಾಗಮಸಾರ, ಹತ್ತಾರು ಅವತಾರಗಳನ್ನು ಭಕ್ತರಕ್ಷಣೆಗಾಗಿ, ಧರ್ಮಸ್ಥಾಪನೆಗಾಗಿ ಎತ್ತಿ ಬಂದವನು.

ನೋಡು, ಎಲ್ಲ ಆಳ್ವಾರರುಗಳೂ ದ್ವಾದಶ ತಿರುನಾಮ ಶೋಭಿತರಾಗಿ ನಾಲಾಯಿರ ಪ್ರಬಂಧಗಳಿಂದ ನಿನ್ನನ್ನು ಸ್ತುತಿಸುತ್ತಾ ನಲಿಯುತ್ತಿದ್ದಾರೆ. ಅವರು ಧರಿಸಿರುವ ತಿರುನಾಮಗಳಿಂದ ಮೂಡಿ ಬರುತ್ತಿರುವ ಸುವಾಸನೆಯು ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಿದೆ. ಇವರುಗಳ ಆನಂದಕ್ಕೆ ಎಣೆಯೇ ಇಲ್ಲವೇನೋ ?

ಮಾಧವ ನಿನಗಾಗಿ ಹಾಲು ಬೆಣ್ಣೆ, ಮೊಸರು ತುಪ್ಪ ಹಾಲೋಗರ ಸಹಿತ ತಂದಿದ್ದೇವೆ. ಎಲ್ಲವನ್ನೂ ಸ್ವೀಕರಿಸು. ಉದ್ದವನು ಸದಾಕಾಲ ನಿನಗಾಗಿ ತಹತಹಿಸುವಂತೆ ಇಂದು ನಾವೂ ಸಹ ನಿನಗಾಗಿ ತಹತಹಿಸುತ್ತಿದ್ದೇವೆ ನಿನ್ನ ಒಡನಾಟಕ್ಕಾಗಿ.

ನೀನು ನಮಗೊಲಿದು ದರ್ಶನವಿತ್ತ ನಂತರವೇ ನಾವು ಸಕಲಾಭರಣಭೂಷಿತರಾಗಿ ಉಡುಗೆತೊಡುಗೆಗಳಿಂದಲಂಕೃತರಾಗಿ ನಲಿಯುವೆವು. ನೀನೀವ ಪಾಲ್ಬೆಣ್ಣೆ ಮೊಸರು ಹಾಲೋಗರ ಮಧುವನ್ನು ಸೇವಿಸುವೆವು. ಈ ಸುದಿನಕ್ಕಾಗಿಯೇ ನಾವು ಈ ಮಾರ್ಗಶಿರ ವ್ರತವನ್ನು ಆಚರಿಸಿ ಬಂದಿದ್ದೇವೆ. ಕರುಣಿಸು, ನಿನ್ನ ದರ್ಶನಭಾಗ್ಯವನ್ನು ಕರುಣಿಸು. ನಿನ್ನ ಪದತಲದಲ್ಲಿ ನಮಗೆ ಆಶ್ರಯವನ್ನು ಕರುಣಿಸು.

ಬಾ ಕೃಷ್ಣ, ಕಾರುಣ್ಯ ಸಿಂಧುವೆ, ಬಂದೆಮ್ಮನ್ನು ಉದ್ಧರಿಸು.

ಇದರಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೆ ಮಂಗಳವಾಗಲಿ.





## ಪಾಶುರ - ೨೮

ಕರವೈಗಳ್ ಪಿನ್ ಶೆನ್ರು ಕಾನಂ ಶೇರ್‌ನ್ದುಣ್ಬೋಂ
ಅರಿವೊನ್ರುಮಿಲ್ಲಾದ ಪಾಯ್ ಕ್ಕುಲತ್ತು ಉನ್ತನ್ನೈ
ಪ್ಪಿರವಿಪ್ಪೆರುನ್ದನ್ನೈ ಪುಣ್ಣಿಯಂ ಯಾಮುಡೈಯೋಂ
ಕುರೈವೊನ್ರುಮಿಲ್ಲಾದ ಗೋವಿಂದಾ  ಉನ್ತನ್ನೋಡು
ಉರವೇಲ್ ನಮಕ್ಕಿಂಗೊಳಿಕ ಒಳಿಯಾದು
ಅರಿಯಾದ ಪಿಳ್ಳೈಹಳೋಂ ಅನ್ಬಿನಾಲೆ ಉನ್ತನ್ನೈ
ಶಿರುಪೇರಳೈತ್ತನವುಂ ಶೀರಿಯರುಳಾದೇ
ಇರೈವಾ ನೀತಾರಾಯ್ ಪರೈ ಯೇಲೋರೆಂಬಾವಾಯ್

ಭಾವಾನುವಾದ - ೨೮

*ಬಾ ಕೃಷ್ಣ ಬಾಬಾರೋ ಬಾಲಗೋಪಾಲ ಗೋಕುಲಾನಂದಕಂದ*
*ಬಂದೆಮ್ಮನೊಲುಮೆಯಲಿ ಸಲಹಯ್ಯ ಬೃಂದಾವನಾನಂದ ಆನಂದ* *॥ ಪ ॥*

ಹಂಚಿ ಮೆಲ್ಲುವ ಬಾ ತಂದ ಬುತ್ತಿಯನೆಲ್ಲ ಕೊಳಲಗಾನವ ತುಂಬಿ ಹೃನ್ಮನದಿ
ಮುಗ್ಧ ಗೋವಳರ ಕುಲದೈವ ಕಲ್ಪತರು ಕಾಮಧೇನುವೆ ಸುವ್ರತನೆ ಸನಾತನನೆ
ನಿನ್ನ ಸಂಕಲ್ಪದಿಂದೈದಿರುವೆಮಗಿರಲಿ ನಿನ್ನೊಡನೆ ರಾಸಕ್ರೀಡೆಯ ಬೆಳದಿಂಗಳ
ಬಾಳಸಂಪದವು
ಇರಲೆಮಗೆ ನಿನ್ನ ಮಮತೆಯ ಅನುಬಂಧ ಭೂತನಾಥೇಶ್ವರ ನಮಿತ
ಸುಚರಿತ
ನಿನ್ನನುದಿನವು ಸಖನೆ ಪಾಲ್ಬೆಣ್ಣೆ ಕಳ್ಳನೆಂದಿಹೆವು ಅನುನಯದಿ ಮನ್ನಿಸೆಮ್ಮನು
ನೀ ಪರಿಪೂರ್ಣ ಸತ್ಯಸ್ವರೂಪ ಗೋಪಿಯರಂತೈದಿರುವ ಮುನಿಗಳನು
ಪೊರೆಯೋ
ಪಲ್ಗುಣನಿಗೊಲಿದಂತೆ ತೋರೆಮಗೆ ನಿನ್ನನಂತ ವಿಶ್ವರೂಪ ವಿಶ್ವಾತ್ಮ
ಶ್ರೀ ಹರಿಯೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ ಮುಂಬೆಳಕು





## ಪಾಶುರ - 28

### ಸಂಕ್ಷಿಪ್ತ ಭಾವಾರ್ಥ

ಕೃಷ್ಣಾ, ಗೋವುಗಳನ್ನು ಮೇಯಿಸಲು ಹೋಗುವಾಗ ತಿನ್ನಲೆಂದು ತಂದಿರುವ ಎಲ್ಲಾ ಬುತ್ತಿಯನ್ನೂ ಹಂಚಿಕೊಳ್ಳೋಣ ಬಾ. ನೀನು ನಮ್ಮ ಗೋಪಾಲಕರ ಕುಲ ತಿಲಕ. ಕಲ್ಪತರು ಕಾಮಧೇನು. ನಮ್ಮ ಈ ಚಿಕ್ಕ ಕೋರಿಕೆಯನ್ನು ಈಡೇರಿಸು.

ನಾವು ವಿದ್ಯಾವಂತರಲ್ಲ, ಧರ್ಮವನ್ನು ತಿಳಿದವರಲ್ಲ. ಇಂತಹ ಮುಗ್ಧರಾದ ನಮ್ಮ ಕುಲದಲ್ಲಿ ಜನಿಸಬಂದಿರುವ ಸಕಲ ಧರ್ಮಸಾರ ಸಂಗಮನು ನೀನು. ಹಿಂದೊಮ್ಮೆ ಋಷಿಗಳಾಗಿದ್ದವರು ಗೋಪಿಯರಾಗಿ ಬಂದಿರುವ ನಮ್ಮನ್ನು ನಿನ್ನ ಮಾತಿನಂತೆ, ನಿನ್ನ ಸಂಕಲ್ಪದಂತೆ ಬಂದಿರುವ ನಮ್ಮೊಡನೆ ಆಡು ಬಾ. ನಿನ್ನೊಡನೆ ರಾಸ ಕ್ರೀಡೆಯಾಡುವ ಸೌಭಾಗ್ಯ ಸಂತಸ ನಮಗಿರಲಿ.

ಅಲ್ಲದೆ ಇನ್ನು ಮುಂದೆಯೂ ಜನ್ಮ ಜನ್ಮಾಂತಲಗಳಲ್ಲಿಯೂ ನಾವೂ ನಮ್ಮ ಜೀವನದಲ್ಲಿ ಸದಾಕಾಲ ನಿನ್ನ ಧ್ಯಾನದಲ್ಲಿರುವಂತೆ ನಮ್ಮನ್ನು ಅನುಗ್ರಹಿಸು.

ನಿನ್ನನ್ನು ನಾವು ಸ್ನೇಹಿತನೇ, ಗೆಳೆಯನೇ, ಪಾಲ್ಬೆಣ್ಣೆ ಕದ್ದ ಕಳ್ಳ ಎಂದು ಅನೇಕ ವಿಧಗಳಿಂದ ಕರೆದಿದ್ದೇವೆ. ಇದು ಕೇವಲ ಪ್ರೀತಿಯಿಂದ, ಆತ್ಮೀಯತೆಯಿಂದ, ಮುಗ್ದತೆಯಿಂದ ಕರೆದಿದ್ದೆ ಆಗಿದೆ. ಆದ್ದರಿಂದ ನಾವು ತಿಳಿದೋ ತಿಳಿಯದೆಯೋ ಮುಗ್ದತೆಯಿಂದ ಎಸಗಿರಬಹುದಾದ ಎಲ್ಲ ಅಪರಾಧಗಳನ್ನೂ ಮನ್ನಿಸು.

ನೀನು ಸಕಲ ಚರಾಚರಕ್ಕೆ ಜನಕ ಜನನಿ. ಕಿರೀಟಿಗೊಲಿದು ವಿಶ್ವರೂಪವನ್ನು ತೋರಿಸಿದಂತೆ ನಮಗೂ ಸಹ ನಿನ್ನ ವಿಶ್ವರೂಪ ದರ್ಶನವನ್ನು ಮಾಡಿಸಿ ನಮ್ಮನ್ನು ಉದ್ದರಿಸು.

ನಿನ್ನ ಕಾರುಣ್ಯ ಪೂರ್ಣ ಅನುಗ್ರಹದಿಂದ ನಮ್ಮ ವ್ರತವು ಈಡೇರಿ ಸಮಸ್ತಲೋಕ್ಕೂ ಮಂಗಳವಾಗಲಿ.





### ಪಾಶುರ - ೨೯

ಶಿತ್ತಂ ಶಿರುಕಾಲೇ ವನ್ದುನ್ನೈ ಚ್ಚೇವಿತ್ತು ಉನ್
ಪೋತ್ತಾಮರೈಯಡಿಯೇ ಪೋತ್ತುಂ ಪೋರುಳ್
ಕೇಳಾಯ್
ಪೆತ್ತಂ ಮೇಯ್ತುಣ್ಣುಂ ಕುಲತ್ತಿಲ್ ಪಿರಿಂದು ನೀ
ಕುತ್ತೇವಲೆಂಗಳೈಕ್ಕೊಳ್ಳಾಮಲ್ ಪೋಗಾದು
ಇತ್ತೈಪ್ಪರೈಕೊಳ್ವಾ ನನ್‌ಗಾಣ್ ಗೋವಿಂದಾ
ಎತ್ತೈಕ್ಕುಂ ಎಳೇಳು ಪಿರವಿಕ್ಕುಂ ಉತ್ತನ್ನೋಡು
ಉತ್ತೋಮೇಯಾವೋಂ ಉನಕ್ಕೇ ನಾಮಾಳ್‌ಶೈವೋಂ
ಮತ್ತೈನಂ ಕಾಮಂಗಳ್ ಮಾತ್ತೇಲೋರೆಂಬಾವಾಯ್

### ಭಾವಾನುವಾದ - ೨೯

*ಅನ್ಯಥಾ ಶರಣಂ ನಾಸ್ತಿ ನೀನೇ ನಮಗೆಲ್ಲ ಮುಕ್ತಿ ಪರಂಧಾಮ*
*ಮಮತೆಯಾ ಮೂರುತಿಯೇ ಜಗನ್ನಾಥ ಶ್ರೀ ಶ್ರೀನಿವಾಸ* *|| ಪ ||*



ಪದಪಂಕಜವ ಪಾಡಿಹೆವು ಭಕುತಿಯಲಿ ನೋಂಪಿಯನಾಚರಿಸಿ ಶ್ರೀಕರನೆ
ಮಾರ್ಗಶಿರದುದಯದಲಿ ಶೃತಿಸಾಗರನೆ ಲೋಕತ್ರಯಾಶ್ರಿತನೆ
ಸ್ವೀಕರಿಸೆಮ್ಮ ಸೇವೆಗಳ ನಂದಗೋಪಾಲ ಬೃಹದ್ರೂಪ ಹೇ ಶ್ರೀನಿವಾಸ
ಎಲ್ಲ ಜನುಮಗಳಲಿರಲೆಮಗೆ ನಿನ್ನ ಸೇವೆಯ ಭಾಗ್ಯ ನಿನ್ನೊಡನಾಟ ತಪ್ಪದಿದು
ಕುಂತೀಸುತರಿಗೊಲಿದಂತೆ ಸಲಹೆಮ್ಮನನುನಯದಿ ಕ್ಷೀರಾಬ್ಧಿತನಯ ರಮಣ
ವಿಧುರಾಕ್ರೂರ ಸುಧಾಮರಿಗೊಲಿದಂತೆ ಸಲಹಯ್ಯ ಸರ್ವವಾಗೀಶ್ವರೇಶ್ವರನೆ
ನೀನನಾಥ ಬಂಧು ಎಂಬಭಿದಾನವನು ಮೆರೆಯಬೇಕಯ್ಯ ಸಪ್ತಾದ್ರಿವಾಸ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ ಮುಂಬೆಳಕು



## ಪಾಶುರ - 29

### ಸಂಕ್ಷಿಪ್ತ ಭಾವಾರ್ಥ

ಗೋವಿಂದಾ, ಗೋಪಾಲ, ಶ್ರೀತುಳಸಿ ವನಮಾಲಿ, ನೀನು ನಮ್ಮೆಲ್ಲ ಬಯಕೆಗಳನ್ನೂ ಬಲ್ಲವನು. ನಮ್ಮ ಮುಗ್ಧಾಂತಃಕರಣ ಸೇವೆಯನ್ನು ಸ್ವೀಕರಿಸು. ನಾವುಗಳು ಸದಾಕಾಲ ನಿನ್ನ ಸೇವೆಯಲ್ಲಿರುವಂತೆ ನಿನ್ನ ನೆರಳಿನಲ್ಲಿಯೇ ನಡೆಯುವಂತೆ ಅನುಗ್ರಹಿಸು. ನಿನ್ನ ಎಲ್ಲ ಲೋಕರಕ್ಷಣಾವತಾರಗಳಲ್ಲಿ ನಿನ್ನೊಡನೆ ನಾವೂ ಜನಿಸಿ ನಿನ್ನ ಧರ್ಮಸಂಸ್ಥಾಪನೆಯ ಕೆಲಸಗಳಲ್ಲಿ ಭಾಗಿಗಳಾಗುವಂತೆ ಅನುಗ್ರಹಿಸು.

ನಮ್ಮಿಂದ ದೂರ ಸರಿಯದಿರು. ಯತಿರಾಜವರದ, ಪಾಂಡುತನಯರಿಗೊಲಿದಂತೆ, ಕಿರೀಟಿಗೊಲಿದು ಪಾರ್ಥಸಾರಥಿಯಾದಂತೆ ನಮ್ಮ ಬಾಳ ರಥವನ್ನು ನಡೆಸಿಕೊಡು. ಕೃಷ್ಣೆಯಳಲನ್ನು ದೂರಮಾಡಿದ ಗೋವಿಂದನಾಗಿ ನಮ್ಮನ್ನು ಪೊರೆದು, ನೀನು ಅನಾಥ ಬಂಧು ಎಂಬ ನಿನ್ನ ಹೆಸರನ್ನು ಉಳಿಸಿಕೊಳ್ಳುವವನಾಗು.

ನಿನ್ನ ಕೃಪಾ ಕಟಾಕ್ಷದಿಂದ ನಮ್ಮ ವ್ರತವೂ ಈಡೇರಿ ಸಮಸ್ತಲೋಕಕ್ಕೂ ಮಂಗಳವಾಗಲಿ.







ಕರಾರವಿಂದೇನ ಪದಾರವಿಂದಂ
ಮುಖಾರವಿಂದೇ ವಿನಿವೇಶಯಂತಂ
ವಟಸ್ಯ ಪತ್ರಸ್ಯ ಪುಟೇಶಯಾನಂ
ಬಾಲಂ ಮುಕುಂದಂ ಮನಸಾ ಸ್ಮರಾಮಿ



## ಪಾಶುರ - ೩೦

ವಂಗಕ್ಕಡಲ್ ಕಡೈಂದ್ ಮಾಧವನ್ನೈ ಕ್ಕೇಶವನ್ನೈ
ತಿಂಗಳ್ ತಿರುಮುಹತ್ತುಚ್ಚೇಯಿಳೈಯಾರ್ ಶೆನ್ನಿರೈಂಜಿ
ಅಂಗಪ್ಪರೈ ಕೊಂಡ ವಾತ್ತೈ ಅಣಿಪುದುವೈ
ಪೈಂಗಮಲತ್ತರಿಯಲ್ ಪಟ್ಟರ್‌ಪಿರಾನ್ ಕೋದೈಶೊನ್ನ
ಶಂಗತ್ತಮಿಳ್ ಮಾಲೈ ಮುಪ್ಪದುಂ ತಪ್ಪಾಮೇ
ಇಂಗಪ್ಪರಿಶುರೈಪ್ಪಾರ್ ಈರಿರಂಡು ಮಾಲ್‌ವರೈತ್ತೋಳ್
ಶೆಂಗಳ್ ತಿರುಮುಹತ್ತು ಚ್ಚೆಲ್ವತ್ತಿರುಮಾಲಾಲ್
ಎಂಗುಂ ತಿರುವರುಳ್ ಪೆತ್ತು ಇನ್ಬುರುವರೆಂಭಾವಾಯ್

**ಭಾವಾನುವಾದ - ೩೦**

*ಬನ್ನಿ ಬನ್ನಿರೆನ್ನೆಲ್ಲ ಒಲವ ಬಂಧುಗಳೇ ಮಮತೆಯಾ ಮಡಿಲುಗಳೇ*
*ಪಾಡುತಾಡುತ್ತ ಪರಮನಡಿದಾವರೆಗಳನು ಧನ್ಯರಾಗುವ ಬನ್ನಿ* ॥ ಪ ॥

ಭವಸಾಗರದನಂತ ನಾವೆಗಳ ನಾವಿಕನ ಜ್ಞಾನಗಮ್ಯಾದಿ ದೇವನನು
ಮಾರ್ಗಶಿರ ನೋಂಪಿಯಿಂಪಾಡಿಕೊಂಡಾಡುತ ಪರಮನಡಿ ಸೇರೋಣ
ಬನ್ನಿ ಬನ್ನಿರೆನ್ನೆಲ್ಲ ಬಾಂಧವರೆ ಮೋಕ್ಷ ಕಾಮಿಗಳಾಗುವ ಬನ್ನಿರೊಲವಿಂದ
ಗೋದೆ ರಚಿಸಿದೀ ಆರೈದು ಹೊನ್‌ತಮಿಳ ಗೀತೆಗಳ ತಪ್ಪದೆಲೆ ಪಾಡಿ
ನೋಂಪಿಯನಾಚರಿಸಿ

ಈ ಪರಿಯೊಳಪ್ರಮೇಯನನು ಪಾಡಿ ಬದುಕಿದೊಡೆ ಮಂಗಳವು ಸಕಲರಿಗೆ
ಧನ್ಯವೀ ಗೋದೆಯ ಜನ್ಮಧನ್ಯವೀ ಸಿರಿಗೋದೆ ತೌರೂರು ಸಿರಿವಿಲ್ಲಿ ಪುತ್ತೂರು
ಧನ್ಯಳೆನ್ನಮ್ಮ ಭಾರತಿಯು ಧನ್ಯರೆನ್ನೊಲಮೆಯಲಿ ಸಲಹಿದೆನ್ನಯ್ಯ
ಶ್ರೀವಿಷ್ಣುಚಿತ್ತಮುನಿ

ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲಡೆ ಮಂಗಳದ ಮುಂಬೆಳಕು





## ಪಾಶುರ - 30

ಸಂಕ್ಷಿಪ್ತ ಭಾವಾರ್ಥ

ಬನ್ನಿ ಎಲ್ಲರೊಂದಾಗಿ ಬನ್ನಿ. ಓ ನನ್ನೆಲ್ಲ ಗೆಳತಿಯರೇ, ಭವಸಾಗರದ ನೌಕೆಗಳನ್ನು ಮುಳುಗದಂತೆ ಕಾಪಿಡುವ ಆ ಕ್ಷೀರಸಾಗರ ಶಯನನಾದ ಕಮಲನಾಭನನ್ನು ತದೇಕಚಿತ್ತದಿಂದ ಧ್ಯಾನಿಸಿ ಕೀರ್ತಿಸಿ ಧನ್ಯರಾಗೋಣ.

ಜನನ ಮರಣಗಳ ಜಾಲದಿಂದ ಬಿಡಿಸಿಕೊಳ್ಳೋಣ. ಭವದಾಸೆಗಳ ತೊರೆದು ಮೋಕ್ಷಕಾಮಿಗಳಾಗುವ ಬನ್ನಿ.

ಶ್ರೀಮನ್ನಾರಾಯಣನು ತಪ್ಪದೇ ನಮ್ಮನ್ನು ಸಲಹುತ್ತಾನೆ. ಈ ಮಂಗಳಕರವಾದ ಮಾರ್ಗಶಿರ ಮಾಸದಲ್ಲಿ, ಶ್ರೀವಿಷ್ಣುಚಿತ್ತಮುನಿ ಕರಕಮಲ ಸಂಜಾತೆ ಗೋದಾದೇವಿ ರಚಿಸಿರುವ ಈ ಮೂವತ್ತು ಪದ್ಯಗಳನ್ನೂ ತಪ್ಪದೇಯೇ ಅನುಸಂಧಾನ ಮಾಡಿ ವ್ರತವನ್ನಾಚರಿಸಿ, ದಾನ ಧರ್ಮಗಳನ್ನು ಮಾಡಿ, ಗುರುಹಿರಿಯರಿಗೆ ನಮಸ್ಕರಿಸಿ ಆಶೀರ್ವಾದಗಳನ್ನು ಪಡೆದು ಶ್ರೀಹರಿಯ ಕೃಪೆಗೆ ಪಾತ್ರರಾದಲ್ಲಿ ಈ ಸಿರಿವಿಲ್ಲಿ ಪುತ್ತೂರಿನ ಸಿರಿಗುವರಿಯ ಜನ್ಮ ಸಾರ್ಥಕ. ನನ್ನನ್ನೆತ್ತಿ ಪೋಷಿಸಿದೆನ್ನಯ್ಯ ವಿಷ್ಣುಚಿತ್ತರ ಜನ್ಮ ಸಾರ್ಥಕ.

ನಮ್ಮೆಲ್ಲರಿಗೂ ಜನ್ಮದಾತೆಯಾದ ವಿಶ್ವಮಾತೆಯಾದ ಭಾರತಿಯು ಧನ್ಯಳು. ನನ್ನ ತವರೂರು ಸಿರಿವಿಲ್ಲಿಪುತ್ತೂರು ಧನ್ಯ.

ಸಮಸ್ತ ಸನ್ಮಂಗಳಾನಿ ಭವಂತು.



# ಶ್ರೀ ಗೋದಾದೇವಿ ಅನುಗ್ರಹಿಸಿದ

# ತಿರುಪ್ಪಾವೈ ಗೀತಮಾಲೆ

## ಕಂಡೆ ನಾ ರಾಮಾನುಜರ



ಧನ್ಯನಾದೆನು ನಾನಿಂದು ಧನ್ಯರೆನ್ನೆಲ್ಲ ಕುಲಕೋಟಿ
ಜ್ಯೋತಿರೂಪದಿ ಬಂದ ರಾಮಾನುಜರ ನಾ ಕಂಡೆ ||ಪ||

ತಿದ್ದಿದಾ ತಿರುನಾಮ ಶ್ರೀತುಳಸಿ ಮಣಿಮಾಲೆ ಕೊರಳಲ್ಲಿ
ತ್ರಿದಂಡದಿಂದೊಪ್ಪುವಾ ಶ್ರೀಗುರುವ ನಾ ಕಂಡೆ ||ಅ ಪ||

ಪಾವನವೀ ಧರೆಯು ಗುರು ಚರಣ ಸ್ಪರ್ಷದಿಂದಿಂದು
ಈ ಧರೆಯ ಧೂಳಿಮಗೆ ತಿರುವಾಭರಣವಾಗಿಹುದು
ನಾರಾಯಣ ನಾಮ ತಿರುಮಂತ್ರೋಪದೇಶ ಗೈದೆಮ್ಮ
ಮಾತೆ ಮಮತೆಯ ಗುರುಚರಣವನೆ ನಾ ಕಂಡೆ || 1 ||

ಯತಿರಾಜನೊಡನೈದ ಪಾರ್ಥಸಾರಥಿಯಾ ನಾ ಕಂಡೆ
ಬೀಬಿನಾಚಾರ್‍ಯರು ಮನದನ್ನನಾ ಕಂಡೆ ಮುನಿಯೊಡನೆ
ವೇದನಾದಕೆ ನಲಿವ ವೇಣು ಮಾಧವನಾ ಕಂಡೆ
ವೈಕುಂಠ ತಾನಾಯ್ತು ವೇದಾದ್ರಿ ಗಿರಿಶಿಖರ || 2 ||

ನಿತ್ಯಸೂರಿಗಳ ನಾಕಂಡೆ ಜ್ಞಾನಗಮ್ಯನನು ನಾ ಕಂಡೆನವರಲ್ಲಿ
ಸಾನುರಾಗದಿ ಮಾಲಕುಮಿ ಸೇವಿಪಾ ಸಿರಿಪಾದವನೆ ಕಂಡೆ
ದಾಸಗೋಪಾಲನ ಕುಲಗುರುವೆ ಯತಿರಾಜ ನಿಮ್ಮನೇ ನಾ ಕಂಡೆ
ಪದುಮನಾಭನ ಪಾದದೊಲುಮೆಯು ಎನಗಾಯ್ತು ಇಂದು || 3 ||

## ನುಡಿದಿದೆ ಮನ ಹರಿ ಓಂ



ಮನ ಬಯಸಿದೆ ಹರಿ ನಿನ್ನ ದರುಶನಕೆಂದು
ನುಡಿದಿದೆ ಮನ ಹರಿ ಓಂ || ಪ ||

ಭವಸಾಗರ ಸುಳಿಗಾಳಿಯಲೀ ಬಳಲಿದೆಯೋ ಮನ
ಕೈ ಹಿಡಿದು ನಡೆಸೆನ್ನ ಯಾದವಾಚಲವಾಸ ಶ್ರೀ ಮುಕುಂದ ||ಅಪ||

ಯತಿರಾಜ ವರದ ವಾಲ್ಮೀಕಾಲಯ ನಿಲಯ
ಬೀಬಿನಾಚ್ಯಾರು ಮನದನ್ನ ಚೆಲುವ ನಾರಾಯಣನೇ
ವಿಷ್ಣುಚಿತ್ತರ ಮನದಂತೆ ನಿಲಲೆನ್ನ ಮನ ನಿನ್ನಲ್ಲಿ
ನಂದನಂದನನೇ ಯಾದವಾಚಲವಾಸ ರಾಧಾಪತೀ ||1||

ನೀಡು ನಿನ್ನಯ ದರುಶನವ ಗೋವರ್ಧನೋದ್ಧಾರಿ
ಭಕ್ತ ಭವದೀಯ ತಿರುನಾರಾಯಣನೆ ನಳಿನಾಕ್ಷ
ದ್ರುಪದ ಕುವರಿಯ ಕಾಯ್ದ ರುಕ್ಮಿಣೀ ವಲ್ಲಭನೇ
ಭಕ್ತ ವತ್ಸಲ ಹರಿಯು ನೀನಲ್ಲವೇನೋ ||2||

ಜನಕ ಜನನಿ ನೀನೆನಗೆ ಮಾತೆ ಮಡಿಲನು ನೀಡೋ
ನೀನಲ್ಲದಿನ್ಯಾರು ದಿಕ್ಕೆನಗೆ ಗೀತ ಗೋವಿಂದಾ
ದಾಸಗೋಪಾಲನಾ ಸಲಹೆ ಬೇಗ ಬಾ ಹರಿಯೇ
ವೈಕುಂಠಪುರಿ ವೇದಾದ್ರಿವಾಸ ಯತಿರಾಜ ವರದಾ ||3||

॥ ಶ್ರೀಮತೇ ರಾಮಾನುಜಾಯ ನಮಃ ॥

# ವಾರಣಮಾಯಿರಂ

ಎಂಬ

## ಶೀರ್ಪಾಡಲ್

## ( ಮಾಂಗಲ್ಯ ಗೀತೆ )



ಶ್ರೀಗೋದಾದೇವಿ ಶ್ರೀರಂಗನಾಥರ್ ಮತ್ತು ಗರುಡಾಳ್ವಾರ್

೧. ವಾರಣಮಾಯಿರಮ್ ಶೂೞ್ವಲಂಶೈಯ್ದು
ನಾರಣ ನಂಬಿ ನಡಕ್ಕಿನ್ರಾನೆನ್ರದಿರ್
ಪೂರಣಪೊರ್ಕುಡಮ್ ವೈತ್ತುಪ್ಪುರಮೆಂಗುಮ್
ತೋರಣಂ ನಾಟ್ಟಕ್ಕನಾ ಕ್ಕಂಡೇನ್ ತೋೞಿ ನಾನ್

**ಭಾವಾನುವಾದ** : ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ
ಸಾವಿರಾರು ಗೆಳೆಯರೆಲ್ಲರಾನೆಗಳ ಹೆಗಲೇರಿ ಬರುತಿರಲು
ಅಗ್ರದಲಿ ತಾ ಮದಗಜವನೇರಿ ಮಂದಹಾಸವ ಬೀರಿ
ಕಲ್ಯಾಣ ಗುಣ ಸಾಗರ ಶ್ರೀಕೃಷ್ಣ ತಾ ಬರುತಲಿರುವಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ
ನಂದನದನನ ಸ್ವಾಗತಕೆ ಮನೆಮನೆಯ ಮಂದೆಲ್ಲ
ಬಿಡಿಸಿ ರಂಗುರಂಗಿನ ರಂಗೋಲಿ ರಮಣಿಯರೆಲ್ಲ
ಇಟ್ಟು ಸ್ವರ್ಣ ಕುಂಭಗಳ ಕಟ್ಟಿ ತಳಿರುತೋರಣ
ಕಮಲನಾಭನಿಗಾರತಿಯ ಬೆಳಗಲಾನಂದದಿ ನಿಂತತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ

೨. ನಾಳೈ ವದುವೈಮಣಮೆನ್ರು ನಾಳಿಟ್ಟು
ಪ್ಪಾಳೈ ಕಮುಕಪರಿಶುಡೈ ಪ್ಪನ್ದಲ್ ಕೀೞ್
ಕೋಳರಿ ಮಾಧವನ್ ಗೋವಿಂದನ್ ಎನ್ಬಾನೋರ್
ಕಾಳೈ ಪುಹುದಕ್ಕನಾ ಕ್ಕಂಡೇನ್ ತೋೞೀ ನಾನ್

**ಭಾವಾನುವಾದ** : ನಾಳೆಯೇ ಮುಹೂರ್ತವೆಂದತಿಶಯದೊಳೊಪ್ಪಿ
ಮರಿಸಿಂಹ ತಾ ಮುಗುಳು ನಗೆಯನೆ ಬೀರಿ
ಶ್ರೀ ತುಳಸಿ ವನಮಾಲಿ ವೇಣುನಾದವ ತುಂಬಿ
ದೇವಿಬಕುಳೆಯ ಕಂದ ತಾ ನಡೆನಡೆದು ಬರುತಿರುವಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ
ಹೊಂಬಾಳೆಯಡಿಕೆ ಸಿರಿಯಲ್ಲಿ ಶೋಭಿಸುತ
ಶೃಂಗಾರ ತೋರಣದಿಂ ಕಂಗೊಳಿಪ ಚಪ್ಪರದ ಸಾಲಿನಲಿ
ಗೋವಿಂದ ಗೋಪಾಲನೆಂದೆಂಬ ಮಯೂರ ಗರಿಧಾರಿ
ನಗುನಗುತ ಮಂದಹಾಸದಿ ತಾ ಬರುತಲಿರುವಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ

೬. ಇಂದಿರನುಳ್ಳಿಟ್ಟ ತೇವರ್‌ಕುೞಾಮೆಲ್ಲಾಮ್
ವಂದಿರುಂದೆನ್ನೈ ಮಹಳ್‌ಪ್ಪೇಶಿ ಮಂದಿರಿತ್ತು
ಮಂದಿರಕ್ಕೋಡಿ ಯುಡಿತ್ತಿ ಮಣಮಾಲೈ
ಅಂದಿರಿಶೂಟ್ಟಕ್ಕನಾ ಕ್ಕಂಡೇನ್ ತೋೞೀ ನಾನ್

ಭಾವಾನುವಾದ : ಮುಕ್ಕೋಟಿ ದೇವತೆಗಳೊಂದಾಗಿ ಸಡಗರದಿ
ಧರೆಗಿಳಿದು ಮದುಮಗಳಾದೆನ್ನ ಹರಸಲೆಂದೆನುತ
ನಲ್ನುಡಿಯ ನುಡಿಯೊಳ್ ನುಡಿಸಿದಂತೆ
ಉಡುಗೆತೊಡುಗೆಯಾಭರಣವಿಟ್ಟಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ
ಎನ್ನೆಡೆಗೆ ಬಂದೆನ್ನ ನಾದಿನಿಯು ಪ್ರೇಮದಲಿ
ಮಂತ್ರ ವಸನವನಿತ್ತು ಜಾಜಿಸಂಪಿಗೆ ಮಲ್ಲೆಯನಿತ್ತು
ಮುಡಿತುಂಬ ಹೂಮುಡಿಸಿ ತಾ ನಲಿದು
ಗಲ್ಲವನೆ ನೇವರಿಸಿ ದೃಷ್ಟಿಬೊಟ್ಟಿಟ್ಟಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ

೭. ನಾಲ್ತ್ತೀಶೈತ್ತೀರ್ಥಮ್ ಕೊಣರ್‌ನ್ದು ನನಿನಲ್‌ಹಿ
ಪ್ಪಾರ್‌ಪ್ಪನಚ್ಚಿಟ್ಟರ್ಹಳ್ ಪಲ್ಲಾರೆಡುತ್ತೇತ್ತಿ
ಪೂಪ್ಪುನೈಕ್ಕಣ್ಣಿ ಪುನಿದನೋಡೆನ್ ತನ್ನೈ
ಕ್ಕಾಪ್ಪುನಾಣ್ ಕಟ್ಟಕ್ಕನಾ ಕ್ಕಂಡೇನ್ ತೋೞೀ ನಾನ್

ಭಾವಾನುವಾದ : ಸಿಂಧುಗಂಗೆಯರು ಯಮುನೆ ಸರಸ್ವತಿಯರಾ
ಮೇಣ್ ಕಪಿಲೆಕಾವೇರಿ ಭೀಮಭದ್ರೆಯರ ಮತ್ತೆ
ಗೋದಾವರೀ ನರ್ಮದೆಯರಾ ತೀರ್ಥಗಳ ಸಂಗ್ರಹಿಸಿ
ತಂದೆನಗೆ ಎಲ್ಲರೊಂದಾಗಿ ಸಿಂಪಡಿಸಿದಂತೆ
ಕನಸೊಂದ ನಾಕಂಡೆ ಕೇಳೆನ್ನ ಸಖೀ
ವೇದಕೋವಿದರೆಲ್ಲರೊಂದಾಗಿ ಪಾಡುತಾಡುತ್ತ
ಪರಿಪರಿಯ ಪುಷ್ಪಗಳ ತೋಮಾಲೆಗಳ ಮುಡಿಸಿ
ದಾಮೋದರನಿಗೆನಗೂ ಸಿಂಗರಿಸಿ ಸಂತಸದಿ
ಒಲವ ಕಲರವದಿ ಕಂಕಣವ ಕಟ್ಟಿದಂತೆ
ಕನಸೊಂದ ನಾಕಂಡೆ ಕೇಳೆನ್ನ ಸಖೀ

೫. ಕದಿರೊಳಿದೀಪಮ್ ಕಲಶಮುಡನೇಂದಿ
ಶದಿರಿಳ ಮಂಗೈಯರ್ ತಾಮ್ ವಂದೆದಿರ್ಕೊಳ್ಳ
ಮದುರೈಯಾರ್ ಮನ್ನನಡಿನಿಲೈ ತೋಟ್ಟೆಂಗುಮ್
ಅದಿರಪ್ಪುಹುದ್ಕನಾ ಕ್ಕಂಡೇನ್ ತೋಳೀ ನಾನ್

ಭಾವಾನುವಾದ : ರವಿಕೋಟಿ ಕಾಂತಿಯ ಮರೆಸುವಂತೆಸೆವ
ದೀಪದಾರತಿ ಸಹಿತ ಕಳಶ ಕನ್ನಡಿ ಪಿಡಿದು
ಸಿರಿನಗೆಯ ಕಡಲ ಸೊಬಗನುಕ್ಕಿಸುತ
ಚತುರ ಬಾಲೆಯರು ಬಂದಿದಿರುಗೊಳ್ವಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ
ವಾಸುದೇವನು ತಾ ಕಿರುನಗೆಯ ಸೂಸುತ್ತ
ಪಾದುಕೆಗಳ ಗೆಳೆಯರಲಿ ಬಿಟ್ಟು ತಾ
ಧರೆಯಲುಗುವಂದದಿ ಪದಕಮಲಗಳನಿಡುತ
ಮರಿ ಸಿಂಹ ತಾ ನಡೆನಡೆದು ಬರುತಲಿರುವಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ

೬. ಮುತ್ತಳಮ್ ಕೊಟ್ಟ ಮರಿಶಿಂಗಮ್ ನಿನ್ರೂದ
ಮುತ್ತಿಡೈತ್ತಾಮಮ್ ನಿರೈತಾಳ್‌ನ್ದ ಪಂದಲ್‌ಕೀಳ್
ಮೈತ್ತುನನ್ ನಂಬಿ ಮದುಶೂದನ್ ವಂದೆನ್ನೈ
ಕೈತ್ತಲಮ್ ಪತ್ತಕ್ಕನಾ ಕ್ಕಂಡೇನ್ ತೋಳೀ ನಾನ್

ಭಾವಾನುವಾದ : ಮದ್ದಳೆಗಳು ಮಾರ್ಧನಿಸಿರಲು ಮೂಲೋಕಗಳಲಿ
ತುಂಬಿರಲೋಂಕಾರ ಶಂಖ ನಾಧಾಮೃತವು
ನಾದ ನಾದ ಸ್ವರವಾಗಿ ಧ್ವನಿಸಿರಲು
ಕೊಳಲಕೃಷ್ಣ ತಾ ನಗುತ ನಡೆನಡೆದು ಬರುತಲಿರುವಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ
ಮುತ್ತುರತ್ನಗಳ ಹಾರಗಳಿಂ ಶೋಭಿಸುತ
ತಳಿರು ತೋರಣ ಚಪ್ಪರದ ಸಾಲಿನಲೆನ್ನ ಮನದನ್ನ
ಗಿರಾಧಾರಿ ಗೋಪಾಲ ತಾನೊಲುಮೆಯಲಿ
ಕಿರನಗೆಯಿಂದ ಬಂದೆನ್ನ ಕರವ ಪಿಡಿದಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ

೭. ವಾಯ್‌ನಲ್ಲಾರ್ ನಲ್ಲಮರೈಯೋದಿ ಮಂದಿರತ್ತಾಲ್
ಪಾಶಿಲೈ ನಾಣಲ್ ಪಡುತ್ತು ಪ್ಪರಿದಿ ವೈತ್ತು
ಕಾಯ್‌ಶಿನ ಮಾಕಳಿರನ್ನಾನೆನ್ ಕೈಪತ್ತಿ
ತೀ ವಲಮ್‌ಶೆಯ್ಯ - ಕ್ಕನಾ ಕ್ಕಂಡೇನ್ ತೋಳಿನಾನ್

ಭಾವಾನುವಾದ : ವೇದಕೋವಿದರತಿಶಯದಾನಂದದಲಿ
ಮಧುರ ಸ್ವರನಾದದಿಂ ಪಠಿಸಿರಲು ವೇದಗೀತೆಗಳ
ಹೋಮಕುಂಡದಲಗ್ನಿಯನು ತಂದಿರಲು
ಅಗ್ನಿದೇವ ತಾ ನಗುತ ಕರಮುಗಿದು ನಿಂತಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ
ಗಜರಾಜ ವರದ ಚತುರ್ಭುಜನು ಮುಗುಳ್ನಗುತ
ಕುಡಿಗಣ್ಣ ನೋಟವೆನ್ನೆಡೆಗೆ ಬೀರಿ ಮುದದಿಂದ
ಪಿಡಿದೆನ್ನ ಕರ ತನ್ನ ಕರಕಮಲದಿಂದೊಲವಿನಲಿ
ಹೋಮಕುಂಡಕೆ ಪ್ರದಕ್ಷಿಣೆಯ ಮಾಡಿಸಿದಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ

೮. ಇಮ್ಮೈಕ್ಕುಮ್ ಏಳೇಳ್ ಪಿರವಿಕ್ಕುಮ್ ಪತ್ತಾವಾನ್
ನಮ್ಮೈಯುಡ್ಯೆಯವನ್ ನಾರಾಯಣನ್ ನಂಬಿ
ಶೆಮ್ಮೈಯುಡ್ಯೆಯ್ಯ ತಿರುಕ್ಕೈಯಾಲ್ ತಾಳ್‌ಪತ್ತಿ
ಅಮ್ಮಿ ಮಿದಿಕ್ಕಕ್ಕನಾ ಕ್ಕಂಡೇನ್ ತೋಳೀ ನಾನ್

ಭಾವಾನುವಾದ : ಜನ್ಮಜನ್ಮಗಳಿಂದೊಡನಾಡಿ ಬಂದವನು ಶ್ರೀರಂಗರಂಗ
ಕ್ಷೀರವಾರಿಧಿ ಶಯನ ಕಮಲಾಕ್ಷ ಕಮಲನಾಭನು
ಭಕ್ತಬಾಂಧವನೆಂಬಭಿದಾನವನು ಪೊತ್ತವನು
ಸಾನುರಾಗದಿ ಬಂದೆನ್ನ ಕರವ ಪಿಡಿದಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ
ವೇದನಾದಾಂತರಂಗ ಕಮಲಾಚಲನಿಲಯ
ಯೋಗಿಜನ ಮಾನಸ ರಾಜಹಂಸ ಕೊಳಲಗೋಪಾಲ
ತನ್ನ ಕೆಂದಾವರೆಯ ಹಸ್ತಗಳಿಂದೆನ್ನ ಕಾಲ್ಬೆರಳ ಪಿಡಿದು
ಅಮ್ಮಿಕಲ್ಲನು ಮೆಚ್ಚಿಸಿದಂತೆ ನಾಚಿ ನಾ ನಿಂತಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ

೯. ವರಿಶಿಲೈವಾಳ್ ಮುಹತ್ತೆನ್ನೈಮ್ಮಾರ್ ತಾಮ್ ವಂದಿಟ್ಟ
ಎರಿಮುಹಮ್ ಪಾರಿತ್ತೆನ್ನೈ ಮುನ್ನೇ ನಿರುತ್ತಿ
ಅರಿಮುಹನಚ್ಚುತನ್ ಕೈಮೇಲ್ ಎನ್ ಕೈವೈತ್ತು
ಪ್ಪೊರಿಮುಹಂದಟ್ಟಕ್ಕನಾ ಕ್ಕಂಡೇನ್ ತೋಳೀ ನಾನ್

ಭಾವಾನುವಾದ : ಅಣ್ಣ ಯತಿರಾಜನೊಡನೆಲ್ಲ ಆಳ್ವಾರರುಗಳೊಂದಾಗಿ
ಚಂದದಲಿ ಮಾತೆ ಮಮತೆಯ ತೋರುತೆನಗೆ
ಮಮತೆಯಲಿ ಮುದ್ದು ಸೋದರಿಯನುಪಚರಿಸಿ
ಆನಂದ ಭಾಷ್ಪಗಳಿಂದೆನ್ನ ಕರೆತಂದಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ
ನಾಚಿದೆನ್ನನು ಅಕ್ಕರೆಯ ಜೇನ್ನುಡಿಯ ಬೆರೆಸಿ
ನರಹರಿಯ ಕೈಗಳಿಗೆನ್ನ ಒಲವ ಹಸ್ತವನಿಟ್ಟು
ಅರಳಕ್ಷತೆಯ ಕೈಗಿತ್ತು ಹೋಮಕುಂಡಕೆ ಸುರಿಸಿದಂತೆ
ಅಗ್ನಿದೇವನದ ಭಕುತಿಯಲಿ ಸ್ವೀಕರಿಸಿದಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖಿಯೇ

೧೦. ಕುಂಕುಮಮಪ್ಪಿ ಕ್ಕುಳಿರ್‌ಜಾಂದವರ್ ಮಟ್ಟಿತ್ತು
ಮಂಗಲವೀದಿ ವಲಂಶೆಯ್ದು ಮಣನೀರ್
ಅಂಗವನೋಡುಮುಡನ್ ಶೆನ್ರುಂಗಾನೈಮೇಲ್
ಮಂಜನಮಾಟ್ಟಕ್ಕನಾ ಕ್ಕಂಡೇನ್ ತೋಳೀ ನಾನ್

ಭಾವಾನುವಾದ : ಕುಂಕುಮ ಸುಂಗಧ ಕೇಸರಿಯ ಲೇಪನದಿ
ಶ್ರೀಗಂಧ ಚಂದನದ ಸೊಬಗಿನೊಳ್ಮಿಂದು
ಮಂಗಳದ ದೀಪಗಳಿಂದಲಂಕೃತ ಬೀದಿಗಳಲಿ
ನಂದನಂದನನೊಡನೆ ನಾ ಸುತ್ತಿ ಬರುತಿರುವಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ
ರಾಜಬೀದಿಯಲಿ ಗೋಪತಿಯೊಡನೆ ಗಜನ ಹೆಗಲೇರಿ
ಮಲ್ಲಿ ಜಾಜಿಯ ಸುಗಂಧದೋಕುಳಿಯ ನೀರನೆತ್ತಿ
ಮಂಗಳಾಂಗ ಶ್ರೀರಂಗರಂಗನೊಡನೆ ನಾ
ಓಕುಳಿಯನಾಡಿದಂತೆ ನಾಚಿ ನಾ ಮಲ್ಲಿಗೆಯಾದಂತೆ
ಕನಸೊಂದ ನಾ ಕಂಡೆ ಕೇಳೆನ್ನ ಸಖೀ

# ಶ್ರೀ ಗೋದಾದೇವಿ ಮಂಗಳಾಷ್ಟಕಂ

ಮಂಗಳಂ ಶ್ರೀ ಸಿರಿವಿಲ್ಲಿಪುತ್ತೂರು ಸಿರಿವಾರಿಜಾತೆಗೆ
ಶ್ರೀತುಳಸಿ ವನ ಸಂಪ್ರಾಪ್ತೆ ಮಾತೆ ಗೋದಗೆ ನಿತ್ಯಾಜಯ ಮಂಗಳಂ ॥೧॥

ಮಂಗಳಂ ಮಂಗಳದ ಆರೈದು ಗೀತಮಾಲೆಯನಿತ್ತ ಶಾರದೆಗೆ
ತಿರುಪ್ಪಾವೈ ಗೀತಾಚಾರ್ಯೆ ಮಾತೆ ಗೋದೆಗೆ ನಿತ್ಯಾ ಜಯ ಮಂಗಳಂ ॥೨॥

ಮಂಗಳಂ ಶ್ರೀ ವಿಷ್ಣುಚಿತ್ತ ಮುನಿ ಕರಕಮಲ ಸಂಜಾತೆ ಪುಷ್ಪಮಾಲಿನಿಗೆ
ಶ್ರೀರಂಗರಂಗನು ಪುಷ್ಪಮಾಲೆಯಲಿ ಬಂಧಿಸಿದ ಗಂಧವತೀ ಮಾತೆ ಗೋದೆಗೆ ನಿತ್ಯಾ ಜಯ ಮಂಗಳಂ ॥೩॥

ಮಂಗಳಂ ಸಿರಿ ಪೆರಂಬದೂರಿನಾ ಹಿರಿಯಣ್ಣನೊಲುಮೆಯಾ ಸೋದರಿಗೆ
ವೇದಕೋವಿದರ ತೌರೂರು ಸಿರಿವಿಲ್ಲಿಪುತ್ತೂರು ಸಿರಿವಾರಿಜಾತೆಗೆ ನಿತ್ಯಾ ಜಯ ಮಂಗಳಂ ॥೪॥

ಮಂಗಳಂ ಧರೆಯೊಳತಿ ಮನೋಹರ ಪುಷ್ಪ ಸಾಗರ ನಗರ ತನಯೆಗೆ
ಸಿರಿವಿಲ್ಲಿಪುತ್ತೂರಿನಾ ಮಮತೆಯಾ ಕುವರಿ ಮಾತೆ ಗೋದೆಗೆ ನಿತ್ಯಾ ಜಯ ಮಂಗಳಂ ॥೫॥

ಮಂಗಳಂ ತಾ ಮುಡಿದ ಮಾಲೆಯನಿತ್ತು ಶ್ರೀರಂಗರಂಗನ ಮನಸೆಳೆದ
ಗರುಡ ಗಮನ ಶ್ರೀಹರಿಯ ಒಡತಿಯಾದೆಮ್ಮ ಮಾತೆ ಗೋದೆಗೆ ನಿತ್ಯಾ ಜಯ ಮಂಗಳಂ ॥೬॥

ಮಂಗಳಂ ವಾರಣಮಾಯಿರಂ ಗೀತಗುಚ್ಛವನಿತ್ತ ಮಮತೆಯಾ ಮಾತೆಗೆ
ಮಂಗಳಾಂಗ ಶ್ರೀರಂಗರಂಗನೊಡತಿಯಾದೆಮ್ಮ ಸಿರಿದೇವಿ ಗೋದೆಗೆ ನಿತ್ಯಾ ಜಯ ಮಂಗಳಂ ॥೭॥

ಮಂಗಳಂ ಶ್ರೀವೈಷ್ಣವ ಕುಲಕಲ್ಪವಲ್ಲಿ ಮಾತೆಗೋದೆಗೆ ಶುಭಮಂಗಳಂ
ದಾಸಗೋಪಾಲನಾ ಮಾತೆ ಶೂಡಿಕುಡತ್ತಾಣ್ಡಾಳ್ ಮಾತೆ ಭಾರತಿಯ ಸಿರಿಪಾದಕ್ಕೆ ನಿತ್ಯಾ ಜಯ ಮಂಗಳಂ ॥೮॥

**ನಿತ್ಯಾ ಜಯ ಮಂಗಳಂ ನಿತ್ಯಾ ಶುಭಮಂಗಳಂ**



## ಫಲಶ್ರುತಿ

ಸಿರಿವಿಲ್ಲಿಪುತ್ತೂರಿನಾ ಸಿರಿವಾರಿಜಾತೆ ಶ್ರೀ ವಿಷ್ಣುಚಿತ್ತ ಮುನಿ ಕರಕಮಲ ಸಂಜಾತೆ
ನಂದನಂದನನೊಡತಿ ಗಂಧವತೀ ಪೃಥ್ವೀ ಭಾರತಿ ಶ್ರೀವೈಷ್ಣವ ಕುಲಕಲ್ಪವಲ್ಲಿ ಮಾತೆ
ಗೋದೆ ಕರುಣಿಸಿದ ತಿರುಪ್ಪಾವೈ ಮೇಣ್ ವಾರಣಮಾಯಿರಂ ಗೀತೆಗಳ ಭಕುತಿಯೊಳೋದಿ
ಕೇಳಿ ಪೇಳ್ದರಿಗೆಲ್ಲ ಶ್ರೀವೈಷ್ಣವ ಭಕುತ ಭಾಗವತರೆಲ್ಲರಾ ಭಾಳಿನಲಿ ಲಭಿಸುವುದು
ಸುಸಂತಾನ ಸಕಲ ಸಂಪದ ತಪ್ಪದೆಲೆ ಪಡೆಯುವರು ಪರಮ ಪದವಂತ್ಯದಲಿ ಸತ್ಯವಿದೆಂದೆನುತ
ಮಾತೆ ಗೋದೆ ರಚಿಸಿದೀ ಹೊನ್‌ತಮಿಳ ವೇದ ಗೀತೆಗಳ ಕಸ್ತೂರಿ ಕನ್ನಡಕೆ ಭಾವಾನುವಾದವ
ಗೈದನೀಶ್ವರದ ಕಾರ್ತೀಕ ಉತ್ಥಾನ ದ್ವಾದಶಿಯಂದು ಸಲ್ಲಿಸುತ ಕೃತಜ್ಞತೆಗಳ ಅತಿಶಯದಿ
ಇಲ್ಲಾಲು ಸಹಧರ್ಮಿಣಿಗೆ ಬಾಳ ಸಂಗಾತಿಯಾಗೆನ್ನ ನಕ್ಕು ನಗಿಸಿ ನಡೆಸುತಿರುವ ಸೌಭಾಗ್ಯವತಿ
ಸತಿ ಯಶೋದೆಗೆ ಈ ಆತ್ಮಾರಾಮನಾ ದಾಸ ದಾಸಗೋಪಾಲ ಒಲವಿನಲಿ. ಇದನೋದಿ
ಕೇಳಿ ಪೇಳ್ದರಿಗೆಲ್ಲರಿಗೆ ತಪ್ಪದೆಲೆ ನಮ್ಮ ಯದುಶೈಲನಾಥ ಚೆಲುವ ಚೆನ್ನಿಗ ಶ್ರೀ ಯೋಗ ನರಸಿಂಹ ಪ್ರಹ್ಲಾದವರದ
ಯತಿರಾಜ ಸಂಪತ್ಕುಮಾರ ಗರುಡ ಗಮನ ಭಕ್ತಭವದೀಯ ಸಲಹುವನು ತಪ್ಪದೆಲೆ ಸಲಹುವನು ತಪ್ಪದೆಲೆ ತನ್ನ
ಪಾದಕಮಲದಲಾಶ್ರಯವ ನೀಡುತೆಲ್ಲರನು ಸಲಹುವನಿದು ನಿತ್ಯಸತ್ಯ ಸತ್ಯವೆಂದೆನುತ ಪೊಡಮಡುವೆ

ಭದ್ರಂ ಶುಭಂ ಮಂಗಳಂ

ಸಮಸ್ತ ಜನನೀಂ ವಂದೇ ಚೈತನ್ಯ ಸ್ತನ್ಯದಾಯಿನೀಂ ।
ಶ್ರೇಯಸೀಂ ಶ್ರೀನಿವಾಸಸ್ಯ ಕರುಣಾಮಿವ ರೂಪಿಣೀ ॥

ವಂದೇ ವೃಷಗಿರೀಶಸ್ಯ ಮಹಿಷೀಂ ವಿಶ್ವಧಾರಿಣೀಂ ।
ತತ್ಕೃಪಾ ಪ್ರತಿಘಾತಾನಾಂ ಕ್ಷಮಯಾ ವಾರಣಂ ಯಯಾ ॥

ದಯಾಶತಕ



ಓಂ



ನಮೋ



ನಾರಾಯಣಾಯ



ಶ್ರೀಶಂ ನಮಾಮಿ
ಶಿರಸಾ
ಯದುಶೈಲ ದೀಪಂ



# ನಾನಿಂದು ಸ್ಮರಿಸಲೇಬೇಕಾದ ಚೇತನಾತ್ಮರುಗಳಿಗೆ ನಮನ

ನನ್ನ ಬಾಲ್ಯದೊಡನಾಡಿಗಳು (1938) ರಿಂದ ಎಸ್.ಕೃಷ್ಣಮೂರ್ತಿ, ಎಸ್.ಲಕ್ಷ್ಮೀಕಾಂತ, ಮೈಸೂರು, 1942 ರಿಂದ ಸಂತೇಬಾಚಹಳ್ಳಿಯಲ್ಲಿ ಕಿಟ್ಟು, ಬೋರೇಗೌಡ, ಗಧಾದರ, ಸೂರ್ಯನಾರಾಯಣ ಶೆಟ್ಟಿ, ಸತ್ಯನಾರಾಯಣ ಶೆಟ್ಟಿ, ಸಿದ್ದಗಂಗಯ್ಯ ರಂಗಪ್ಪ, ಮಲ್ಲಿಕಾರ್ಜುನ ಮತ್ತು ಗುರುಗಳಾದ ಹೆಚ್.ಕೆ. ತಿಮ್ಮಪ್ಪಯ್ಯನವರು, ರಾಜಪ್ಪಾಚಾರ್‌ರವರು ರಾಮಸ್ವಾಮಿಗಳು ಮತ್ತು ನನ್ನ ಅಣ್ಣ ಬಿ.ಎಸ್.ರಾಜಗೋಪಾಲ ಶರ್ಮ ನಂತರ ಚಿಕ್ಕಮಗಳೂರು ಸರ್ಕಾರಿ ಪ್ರೌಢಶಾಲೆಯಲ್ಲಿ 1949 ರಿಂದ ಶ್ರೀನಿವಾಸ, ರಾಮಸ್ವಾಮಿ, ಅನಂತ, ಮತ್ತು ಗುರುಗಳಾದ ಶ್ರೀ ಕಾಳಪ್ಪಾಚಿರವರು, ರಾಜಗೋಪಾಲ ಅಯ್ಯಂಗಾರ್, ಐ. ಪಾರ್ಥಸಾರಥಿ ಐಯ್ಯಂಗಾರ್, ಚೆಲುವ ಐಯ್ಯಂಗಾರ್, ಎಸ್. ರಂಗನಾಥ್, ಕೃಷ್ಣಮೂರ್ತಿಗಳು, ಮೌಲ್ವಿಗಳು, ನಂತರ 1952 ರಿಂದ ತುಮಕೂರು ಪ್ರಥಮ ದರ್ಜೆ ಕಾಲೇಜಿನಲ್ಲಿ ಹೊನ್ನುಡಿಕೆ ಚನ್ನವೀರಯ್ಯ, ಸಣ್ಣಗುಡ್ಡಯ್ಯ, ಕಿಟ್ಟು, ಹೊನ್ನಗಂಗಯ್ಯ, ವಾಸುದೇವ, ಸಿದ್ದಲಿಂಗಶೆಟ್ಟಿ, ಶಶಿಭೂಷಣ, ವೆಂಕಟರಮಣ, ನಂತರದ ದಿನಗಳಲ್ಲಿ ನನ್ನ ಸಹೋದ್ಯೋಗಿಗಳಾಗಿದ್ದ ಶ್ರೀ ವೆಂಕಣ್ಣಾಚಾರ್, ಮಹಮದ್ ದಸ್ತಗೀರ್, ಮಹದೇವರಾವ್ ಬಾಬಡೆ ಹಾಗೂ ನನ್ನೆಲ್ಲಾ ರಚನೆಗಳನ್ನು ಓದಿ ನನ್ನನ್ನು ಪ್ರೋತ್ಸಾಹಿಸುತ್ತಾ ಬಂದಿರುವ ಹೊನ್ನುಡಿಕೆ ಚನ್ನವೀರಯ್ಯ, ಸಣ್ಣಗುಡ್ಡಯ್ಯನವರು, ವೀಚಿ, ಕಾಶಿ ವಿಶ್ವನಾಥ ಶೆಟ್ಟಿ, ತುಮಕೂರು ಬಾಪೂಜಿ ವಿದ್ಯಾಸಂಸ್ಥೆಯ ಶ್ರೀ ಬಸವರಾಜುರವರು ಬೆಂಗಳೂರಿನ ಎಸ್.ವಿ.ಟಿ. ಸ್ವಾಮಿ ಲಕ್ಕೇನಹಳ್ಳಿ ಸಂಗೀತ ಸುಧಾನಿಧಿ ರಂಗಧಾಮ ಚಾರ್ಯರು, ಮಾಧವಾಚಾರ್ಯರು, ಹಿರೇಮಗಳೂರು ಕಣ್ಣನ್, ಸವ್ಯಸಾಚಿಗಳು, ಅಮೃತೂರು ಶ್ರೀ ಶ್ರೀನಿವಾಸ ಗೋಪಾಲಭಟ್ಟ, ಗೂಳೂರು ರಾಮಾನುಜ ಐಯ್ಯಂಗಾರ್ ನಂತರ ನನ್ನ ನಾಲ್ಕಾರು ಕೃತಿಗಳು ಭಕ್ತ ಬಂಧುಗಳ ಕೈಸೇರಲು, ಮುದ್ರಣಕ್ಕಾಗಿ ಆರ್ಥಿಕ ನೆರವನ್ನು ನೀಡಿದ ಶ್ರೀಲತ, ಸಿ.ಟಿ. ಕೃಷ್ಣಮೂರ್ತಿ ಕೊಲ್ಲಾಪುರ, ಮಹಾರಾಷ್ಟ್ರ ಮತ್ತು ವಿನುತಾ ಶ್ರೀನಿವಾಸನ್, ಔರಂಗಾಬಾದ್, ವೈದೇಹಿ ರಾಮಚಂದ್ರ ಇದೀಗ ಈ ತಿರುಪ್ಪಾವೈ ಗೀತಮಾಲೆ ತಮ್ಮಗಳೆಲ್ಲರ ಕೈಸೇರಲು ಪ್ರಮುಖವಾಗಿ ಆಶೀರ್ವದಿಸಿದ ತುಮಕೂರು ನಗರದ ಎಸ್‌ಬಿಎಂ ನ ವ್ಯವಸ್ಥಾಪಕರಾದ, ಶ್ರೀ ಸತ್ಯನಾರಾಯಣ ಮೂರ್ತಿಗಳು, ನಗದು ಗುಮಾಸ್ತರಾದ ಶಾನುಭೋಗ್‌ರವರು, ಹಾಗೂ ಸಿಬ್ಬಂದಿವರ್ಗ, ಸ್ನೇಹಿತ ಹೆಚ್.ಟಿ. ವೆಂಕಟಕೃಷ್ಣರಾವ್ (ಕಿಟ್ಟು) ದಂಪತಿಗಳು, ತುಮಕೂರು, ಹೋಟೆಲ್ ಹೊಯ್ಸಳದ ಪಾಲುದಾರರಾದ ಶ್ರೀ ಅನಂತಮೂರ್ತಿ ದಂಪತಿಗಳು, ಬಾಂದವ್ಯದ ಶ್ರೀ ರಾಘವೇಂದ್ರರಾವ್ ದಂಪತಿಗಳು, ಹುಳ್ಳೇನಹಳ್ಳಿಯ ಶ್ರೀ ಟಿ. ಲಕ್ಷ್ಮೀನರಸಿಂಹ ಶಾಸ್ತ್ರಿಗಳು (ಹುಳ್ಳೇನಹಳ್ಳಿ ಶಾಸ್ತ್ರಿಗಳು), ತುಮಕೂರಿನ ಎಸ್.ವಿ. ಸ್ಟುಡಿಯೋ ಮಾಲೀಕರಾದ ವೆಂಕಟೇಶ್ ಸಹೋದರರು, ಶಿವ ಸ್ಟೋರ್ಸ್ ಮಾಲೀಕರಾದ ಶ್ರೀ ಸದಾಶಿವಯ್ಯನವರು ಮತ್ತು ಮಕ್ಕಳು ಮತ್ತು ಈ ಪುಸ್ತಕದ ಮುದ್ರಣಕ್ಕೆ ಆರ್ಥಿಕ ನೆರವನ್ನು ತುಂಬು ಹೃದಯದಿಂದ ತಿರುಪತಿ ಧಾರ್ಮಿಕ ಪುಸ್ತಕ ಪ್ರಕಟಣೆಗೆ ರಚಿತವಾಗಿರುವ ಪುಸ್ತಕ ನೆರವು ಸಮಿತಿ ಮತ್ತು ಈ ಪುಸ್ತಕವನ್ನು ಪ್ರಕಾಶಿಸಲು, ಒಪ್ಪಿದ ಬೆಂಗಳೂರಿನ ಶ್ರೀ ರಾಮಾನುಜ ಸೇವಾ ಟ್ರಸ್ಟ್‌ನ ಹಿರಿಯಣ್ಣ ಶ್ರೀ ತಿರು ವರ್ಯಾರಾದಿಯಾಗಿ ಎಲ್ಲಾ ಟ್ರಸ್ಟಿಗಳಿಗೆ ಹಾಗೂ ಅತ್ಯಲ್ಪ ಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ತುಮಕೂರಿನ ಜಿ.ಕೆ. ಆಫ್‌ಸೆಟ್ ಪ್ರಿಂಟರ್ಸ್ ಮಾಲೀಕರಾದ ಶ್ರೀ ಜಿ.ಕೆ. ಸ್ವಾಮಿರವರಿಗೆ ಹಾಗೂ ಲಿಪಿಕಾರರಾದ ಸಿಲಿಕಾನ್ ಕಂಪ್ಯೂಟರ್ಸ್ ಮತ್ತು ಇಂದು ಈ ಕೃತಿಯನ್ನು ಓದಿ ನಮ್ಮನ್ನು ಆಶೀರ್ವದಿಸಿರುವ ಭಾಗವತೋತ್ತಮರಾದ ತಮ್ಮಗಳೆಲ್ಲರಿಗೆ ನನ್ನ ಕೃತಜ್ಞತಾ ಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತಾ ಶ್ರೀ ಯದುಶೈಲನಾಥನು ಸಕಲರಿಗೂ ಸನ್ಮಂಗಳವನ್ನು ಉಂಟುಮಾಡಲೆಂದು ಪ್ರಾರ್ಥಿಸುತ್ತೇನೆ.

ಜೈ ಶ್ರೀರಾಮ್

ದಾಸಗೋಪಾಲ

## ಗ್ರಂಥ ಋಣ

1. ಶ್ರೀ ಕಡಬಂ ದೊರೆಸ್ವಾಮಿ ಅಯ್ಯಂಗಾರ್‌ರವರ ತಿರುಪ್ಪಾವೈ ಕನ್ನಡಾನುವಾದ (ಸಪ್ತಗಿರಿ ಮಾಸ ಪತ್ರಿಕೆಯಲ್ಲಿ ಪ್ರಕಟಿತ)
2. ಎನ್. ಸಂಪತ್ ಅಯ್ಯಂಗಾರ್ ಎಂ.ಎ., ನಿವೃತ್ತ ಪ್ರಾಂಶುಪಾಲರು, ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು ರವರ ಕೃತಿ ತಿರುಪ್ಪಾವೈ ಹೃದಯಂ.
3. ಶ್ರೀ ರಾಮಕೃಷ್ಣಾಶ್ರಮ, ಮೈಸೂರು ಪ್ರಕಟಿತ ಶ್ರೀ ಸ್ವಾಮಿ ವಿಜ್ಞಾನಂದರ ಭಾಷ್ಯ ಸಹಿತ ಶ್ರೀ ವಿಷ್ಣುಸಹಸ್ರನಾಮ. ಹಾಗೂ ಇತರ ಮಹನೀಯರುಗಳ ಪ್ರವಚನಗಳು.
4. ಪ್ರೊಫೆಸರ್ ಕೆ.ಎಸ್. ನಾರಾಯಣಾಚಾರ್ಯರು ಅನುವಾದಿಸಿರುವ ತಿರುಪ್ಪಾವೈ ಶ್ರೀಕೃಷ್ಣ ಲೀಲಾನುಭವ ಪ್ರಬಂಧ.
5. ಶ್ರೀಮತಿ ವಿನುತಾ ಮೂರ್ತಿರವರ ತಿರುಪ್ಪಾವೈ ವ್ಯಾಖ್ಯಾನುಪೂರ್ಣ ಕೃತಿ ತಿರುಪ್ಪಾವೈ (ಶ್ರೀ ವಿದ್ಯಾಗಣಪತಿ ಪ್ರಕಾಶನ)
6. ಶ್ರೀ ಜೆ.ಪಿ. ರಾಜರತ್ನಂರವರ ಸಂಪಾದಿಸಿರುವ ವಾರಣಮಾಯಿರಂ ಕೃತಿ ಪ್ರಾಣೇಶ ಪ್ರಾಪ್ತಿ ಹಾಗೂ ಇತರ ಮಹನೀಯರುಗಳ ಪ್ರವಚನಗಳು.

॥ ಶ್ರೀಮತೇ ರಾಮಾನುಜಾಯ ನಮಃ ॥





# ಶ್ರೀಮಹಾಲಕ್ಷ್ಮೀ ಸುಪ್ರಭಾತಂ

ಮತ್ತು



# ಯದುಶೈಲನಾಥ ಸ್ತೋತ್ರಂ

॥ ಶ್ರೀಮತೇ ರಾಮಾನುಜಾಯ ನಮಃ ॥

# ಶ್ರೀ ಯದುಗಿರಿ ಯತಿರಾಜ ಮಠಂ

ಮೇಲುಕೋಟೆ, ಮಂಡ್ಯ ಜಿಲ್ಲೆ

**ಧರ್ಮೋ ರಕ್ಷತಿ ರಕ್ಷಿತಃ**

## ಮಂಗಲಾಶಾಸನ

ವೇದವಿಹಿತವಾದ ಭಾರತೀಯ ಹಿಂದೂವರ್ಣಾಶ್ರಮ ಧರ್ಮವನ್ನು ಆಚರಿಸುವುದು, ರಕ್ಷಿಸುವುದು, ಉಪದೇಶ, ಪ್ರಚಾರ ಮಾಡುವುದು ನಡೆದಲ್ಲಿ ಆ ಧರ್ಮವು ನಮ್ಮನ್ನು, ನಮ್ಮ ಕುಟುಂಬವನ್ನು ನಮ್ಮ ಗ್ರಾಮ, ನಗರ, ದೇಶವನ್ನೂ ಕಾಪಾಡುವುದು - ರಕ್ಷಿಸುತ್ತದೆ.

ನಿರಾಕಾರವಾದ ಕಣ್ಣಿಗೆ ಕಾಣಿಸದಿರುವ ವಸ್ತುವನ್ನು ಮನಸ್ಸಿಗೆ ತೆಗೆದುಕೊಂಡು, ಧ್ಯಾನಿಸುವುದು ಹೇಗೆ ? ಅಲ್ಲದೆ ಶಾಸ್ತ್ರಗಳಲ್ಲಿ ತಿಳಿಸಿರುವ ಪರಮಾತ್ಮನು ಶಬ್ದ-ರೂಪ-ರಸ-ಗಂಧ-ಸ್ಪರ್ಶ ಎಂಬ ನಮ್ಮ ಪಂಚೇಂದ್ರಿಯಗಳಿಗೆ ಎಟುಕದ ವಸ್ತುವಿನ ಸ್ವರೂಪವು ಹೇಗಿರುವುದು ? ಕಣ್ಣಿಗೆ ಕಾಣಿಸದ ಮನಸ್ಸಿಗೂ ಎಟುಕದ ವಸ್ತುವನ್ನು ಧ್ಯಾನಿಸುವುದು ಹೇಗೆ ? ಇದು ಯಾರಿಂದಲಾದರೂ ಸಾಧ್ಯವೇ ? ಎಂಬುದು ಪ್ರಶ್ನೆ. ಆದ್ದರಿಂದ ನಾವು ಸಾಕಾರ ಪೂಜೆ ಮಾಡುತ್ತೇವೆ.

ಭಗವಂತನಿಗೆ ಈ ಜಗತ್ತು ಶರೀರವಾಗಿರುವಂತೆ ದೇವಸ್ಥಾನವು ಭಗವಂತನಿಗೆ ಶರೀರವು. ಜೀವಾತ್ಮರೂ, ಅಚೇತನವೂ ಭಗವಂತನಿಗೆ ಅಂಶಗಳಾಗಿರುವಂತೆ ಮಂಡಪಗೋಪುರ ಪ್ರಾಕಾರಾದಿಗಳು ಭಗವಂತನ ಅಂಗಾಂಗಗಳು. ಆದ್ದರಿಂದ ಭಾರತೀಯರಾದ ನಾವು ವೇದ ಸಂಸ್ಕೃತಿಗೆ ಸೇರಿದವರಾದ್ದರಿಂದ ಈ ದೇವಾಲಯವನ್ನು ಕಟ್ಟಿ ಭಗವಂತನ ಪ್ರತಿಕೃತಿ ಅರ್ಚಾಮೂರ್ತಿಯನ್ನು ಪ್ರತಿಷ್ಠಿಸಿ ಪೂಜಿಸಿ ಧ್ಯಾನಿಸಿ ಬರುತ್ತೇವೆ.

ಭಗವಂತನ ಆಜ್ಞೆಯೇನೆಂದರೆ,

ಶ್ರುತಿ, ಸ್ಮೃತಿ ಮಮೈವಾಜ್ಞಾ ಅಜ್ಞಚ್ಛೇದೀ ಮಮದ್ರೋಹೀ । ತಾರವಂ ನರಕಂ ಪ್ರಜೇತ್ -

ವೇದ, ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಧರ್ಮಶಾಸ್ತ್ರಗಳು ನನ್ನ ಅಜ್ಞೆಯು. ಅದರಂತೆ ನಡೆಯಬೇಕು, ಇಲ್ಲವಾದಲ್ಲಿ ರೌರವಾದಿ ಕಠಿಣ ಶಿಕ್ಷೆಗೆ ಗುರಿಪಡಿಸುತ್ತೇನೆ. - ಎಂದು.

ನಾವು ತಂದೆಯ ಮಾತಿನಂತೆ ನಡೆಯದಿದ್ದಲ್ಲಿ ತಂದೆಯ ಕೋಪಕ್ಕೆ ಪಾತ್ರರಾಗುತ್ತೇವೆ. ಆಗ ಏನು ಮಾಡುತ್ತೇವೆ ? ಅಮ್ಮನ ಮರೆಹೋಗುತ್ತೇವೆ. ಅದರಂತೆಯೇ ಪುರುಷಕಾರ ರೂಪಿಣಿ ಲೋಕಮಾತೆ ಶ್ರೀಮಹಾಲಕ್ಷ್ಮಿಯನ್ನು ಶರಣುಹೊಂದಬೇಕು. ಶರಣುಹೋಗುತ್ತೇವೆ. ಇದನ್ನೇ ದೇವಸ್ಥಾನದಲ್ಲಿ ತೋರಿಸುವಾಗ -

**ಭಗವದ್ದರ್ಶನೇಚಾದೌ ಕ್ರಿಯಾದೀನಾಂಚದರ್ಶನಂ। ಪುರುಷಕಾರಭೂತಂ ಸ್ಯಾದೇವಾಸ್ಯಾನುಗ್ರಹಪ್ರದಂ ।**
**ತಸ್ಮಾತ್ ಚ್ಛ್ರೀದರ್ಶನತ್ವಾದೌ ಕೃತ್ಯಾದೇವಸ್ಯದರ್ಶನಂ ।**

ನಾವು ದೇವಸ್ಥಾನಕ್ಕೆ ಹೋದಾಗ ಬಲಿಪೀಠದ ಬಳಿ ನಮಸ್ಕಾರ ಮಾಡುತ್ತೇವೆ. ನೇರವಾಗಿ ಭಗವಂತನ ಸಮೀಪಕ್ಕೆ (ಸನ್ನಿಧಿ) ಹೋಗುವುದಿಲ್ಲ. ಕಾರಣ ಅವನು ಹೇಳಿದಂತೆ ನಡೆಯುವುದಿಲ್ಲ. ಕಾರಣ ಅವನು ಶಿಕ್ಷಿಸುವನೆಂದು. ಆದ್ದರಿಂದ ಪ್ರದಕ್ಷಿಣವಾಗಿ ಬರುತ್ತೇವೆ. ಪ್ರದಕ್ಷಿಣ ಮಾರ್ಗದಲ್ಲಿ ತಾಯಿ ಲೋಕಮಾತೆ ಪುರುಷಾಕಾರಭೂತೆ ಶ್ರೀ ಮಹಾಲಕ್ಷ್ಮಿ ಅಮ್ಮನವರ ಸನ್ನಿಧಿಯಲ್ಲಿ ಬರುತ್ತೇವೆ. ತಾಯಿಯು ಹೆದರಬೇಡ ತಂದೆಯಹತ್ತಿರ ಹೋಗೆಂದು ಹೇಳಿದರೂ, ತಂದೆಯು ಶಿಕ್ಷಿಸುವನೆಂಬ ಭಯದಿಂದ ಅವನ ಬಳಿ ಹೋಗುವುದಿಲ್ಲ. ಆಗ ತಾಯಿಯಾದವಳು ಪುರುಷಕಾರಿಯಾದುದರಿಂದ ತನ್ನ ಮಕ್ಕಳ ಮೇಲಿನ ಪ್ರೀತಿವಾತ್ಸಲ್ಯದಿಂದ ನಾನು ಬರುತ್ತೇನೆ. ನೀನುತಂದೆಯ ಬಳಿ ಬರುವುದೆಂದು ಹೇಳಿ ಈ ಚೇತನನನ್ನು ಅನುಗ್ರಹಿಸಿ, ತಾನು ತಂದೆಯ ಬಳಿಗೆ ಬಂದು ಪುತ್ರನು (ಈ ಚೇತನನು) ಬರುವನು ನೀವು ಶಿಕ್ಷಿಸಬೇಡಿ, ಶಿಕ್ಷಿಸಲು ಹೋದರೆ ಪುನಃ ಓಡಿಹೋಗುವನು "ಪುನರಪಿಜನನಂ, ಪುನರಪಿ ಮರಣಂ" ಎಂಬ ಚಕ್ರಕ್ಕೆ ಸಿಕ್ಕಿ ತೊಳಲುವನು. ಆದ್ದರಿಂದ ಅವನನ್ನು ಅನುಗ್ರಹಿಸಿ ಎಂದು ಹೇಳುವಳು, ಭಗವಂತನು ಸ್ವತಃ ಕರುಣಾಮೂರ್ತಿಯಾದ್ದರಿಂದ ಲೋಕದಲ್ಲಿ ಪತಿಯಾದವನು ತನಗೆ ಪ್ರೀತಿ ಪಾತ್ರಳಾದ ಧರ್ಮಪತ್ನಿ - ಹೆಂಡತಿಯ ಮಾತನ್ನು ತೆಗೆದುಹಾಕಲಾರದೆ ಮಗ ದುಷ್ಟನಾಗಿದ್ದರೂ ಪ್ರೀತಿಸುವಂತೆ ಅನುಗ್ರಹಿಸುವನು ಅರ್ಥಾತ್ ತೀರ್ಥಪ್ರಸಾದ, ಶ್ರೀಶಠಗೋಪವೆಂಬ ಮರ್ಯಾದೆ ಪರಿವಟ್ಟವೆಂಬ ಶೇಷವಸ್ತ್ರ, ಇತ್ಯಾದಿಗಳಿಂದ ಅನುಗ್ರಹಿಸುವನು. ಅದರಂತೆ ನಾವು ಪ್ರತಿನಿತ್ಯವೂ ಉದಯಕಾಲದಲ್ಲಿ ಏಳುವಾಗ ತಾಯಿ - ಪುರುಷಕಾರಿಣಿಯಾದ ಶ್ರೀ ಮಹಾಲಕ್ಷ್ಮೀ ಸುಪ್ರಭಾತವನ್ನು ಹೇಳಿ ನಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸುತ್ತೇವೆ. ನಮಗೆ ಪ್ರಾರ್ಥನೆ ಮಾಡಲು ಬರುವುದಿಲ್ಲವಾದ್ದರಿಂದ ನಮ್ಮ ಪ್ರಿಯ ಶಿಷ್ಯರಾದ ಅರ್ಚಕ ಶ್ರೀಮಾನ್ ಬಿ.ಎಸ್. ವೇಣುಗೋಪಾಲ್, ಅವರು ನಮಗೂ ನಮ್ಮ ಗ್ರಾಮ, ರಾಷ್ಟ್ರಕ್ಕೂ ಒಳ್ಳೆಯದಾಗಲು ಶ್ರೀ ಮಹಾಲಕ್ಷ್ಮಿ ಸುಪ್ರಭಾತ ಗಾಯತ್ರಿ ಎಂಬ ಸಂಖ್ಯೆ 24 ಪದ್ಯಗಳಿಂದ ಕರ್ನಾಟಕ ಭಾಷೆಯಲ್ಲಿ ರಚಿಸಿ ಉಪಕಾರ ಮಾಡಿರುತ್ತಾರೆ.. ಅಲ್ಲದೆ ಕೊನೆಯಲ್ಲಿ ಶ್ರೀ ಮಹಾಲಕ್ಷ್ಮಿಯ ಸ್ತೋತ್ರ ಲಕ್ಷ್ಮ್ಯಷ್ಟಕವನ್ನೂ ಬರೆದು ಸೇರಿಸಿರುತ್ತಾರೆ. ಆ ಪದ್ಯಗಳು ಬಹು ಲಲಿತವಾಗಿವೆ. ಸಹೃದಯರಾದ ಪಾಠಕರು ಅದನ್ನು ತೆಗೆದುಕೊಂಡು ಹೃದ್ಗತಮಾಡಿಕೊಂಡು ಪ್ರತಿನಿತ್ಯವೂ ಬೆಳಿಗ್ಗೆ ಏಳುವ ಸಮಯದಲ್ಲಿ ಒಂದಾವರ್ತಿ ಅನುಸಂಧಾನಮಾಡಿ ಜಗತ್ತಿನ ಮಾತಾಪಿತೃಗಳ ಅನುಗ್ರಹಕ್ಕೆ ಪಾತ್ರರಾಗಿ ನಿಮ್ಮ ಮಕ್ಕಳಿಗೂ ಹೇಳಿಕೊಟ್ಟು ಇಹಪರ ಶ್ರೇಯೋಭಾಗಿಗಳಾಗುವರೆಂದು ಆಶಿಸುತ್ತೇನೆ. ಇದರಿಂದ ಲೇಖಕರ ಹೃದಯವೂ ತೃಪ್ತಿಪಡುತ್ತದೆ ಎಂದು ತಿಳಿಸಿ ಮಾಡುವ ಮಂಗಲಾಶಾಸನಗಳು.

**12.11.1992** **-ಶ್ರೀ ರಾಮಾನುಜ**

## ॥ ಶ್ರೀ ಮಹಾಲಕ್ಷ್ಮೀ ಸುಪ್ರಭಾತಂ ॥

ನಮಸ್ತೇ ಸದಾವತ್ಸಲೇ ಸರಸಿಜನಿಲಯೇ ಓಂಕಾರರೂಪಿಣಿಯೇ ವೇದಮಾತೆಯೇ ।
ನಮಸ್ತೇ ಯದುಶೈಲನಾಥನರಸಿ ಶ್ರೀ ಮಹಾಲಕ್ಷ್ಮಿ ನಮಸ್ತೇ ನಮಸ್ತೇ ನಮಸ್ತೇ ನಮಃ ॥

ಸುಪ್ರಭಾತವು ತಾಯೆ ಜಗನ್ಮಾತೆ ಯದುಶೈಲನಿಲಯೇ ।
ವರದೆ ವಾರಿಜಾಸನೆ ನಾರಾಯಣಿಯೆ ಜಗನ್ಮಾತೆ ।
ಶರಣು ಶರಣಮ್ಮ ಶಿವನ ಸೋದರಿಯೇ ತಾಯೆ ।
ನಳಿನನಾಭನ ಹೃತ್ಕಮಲ ನಿಲಯೇ ಶ್ರೀ ಮಹಾಲಕ್ಷ್ಮಿಯೇ ॥
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೧ ॥

ಸುಪ್ರಭಾತವು ಮಾತೆ ಮಾತೆಯರ ಮಾತೆ ಜಗನ್ಮಾತೆ ।
ಸಕಲ ಸುರಮುನಿಸಂಸ್ತುತ್ಯೆ ಸಿಂಧುರಾಜ ತನಯೆ ।
ಚಂದ್ರಮುಖಿ ಚಾರು ಚರಣಾಂಬುಜೆಯೆ ತಾಯೆ ಭಾರತಿಯೇ ।
ದಿವ್ಯ ರತ್ನಾಭರಣ ಭೂಷಿತಳೆ ನಳಿನಾಕ್ಷಿ ಸಿರಿವಿಲ್ಲಿ ಪುತ್ತೂರು ಸಿರಿನಿಧಿಯೆ ॥
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೨ ॥

ಸಕಲ ಸಂಪ್ಪದವ ನೀಡು ಬಾ ತಾಯೆ ಶರಧಿಸುತೆ ಸೌಭಾಗ್ಯೆ ।
ನಿನ್ನೊಂದು ಕಿರುಣಾ ಕಟಾಕ್ಷದಿಂದ ಸಲಹಮ್ಮ ಕಂದರನು ।
ಸುರಾಸುರರು ಕಡೆದಿರಲು ವಾರಿಧಿಯ ಮುದದಿ ಬಂದವಳೆ ।
ಚಲುವನಾರಾಯಣನ ಮನದನ್ನೆ ಅಂಬುಜಾಕ್ಷಿ ಅರವಿಂದಾಲಯೆ ॥
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೩ ॥

ಕೇಳು ಕಂದಮ್ಮಗಳೆಲ್ಲಾ ಅಂಬ ಅಂಬಾ ಎಂದಾಡಿ ಬಂದಿಹವು
ಸರಭಿಗಳಾತುರದಿ ಕಂದರಿಗೆ ಕ್ಷೀರಧಾರೆಯ ಕರೆದಿಹುವು
ಗೋವಳರು ನೊರೆಹಾಲು ತಂದಿಹರು ಶಿರದಿ ಪೊತ್ತಿಹರು
ನಿಂದಿಹರು ನಿನ್ನ ದರುಶನಕೆ ಹರಸೆಲ್ಲಾ ಕಂದರನು ಬಾ ತಾಯಿ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೪ ॥

ಯದುಶೈಲಶಿಖರದಲಿ ಹಾಡಿ ನಲಿದಿಹುದು ಪಕ್ಷಿ ಸಂಕುಲವು
ಹಕ್ಕಿಗಳಿಂಚರದ ಗಾನಮೃತವ ಕೇಳಮ್ಮ ಸಿರಿವರದೆ
ನಿನ್ನ ಚರಣಕ್ಕೆ ನಮಿಸೆ ರವಿಕಿರಣ ಮೂಡಿಹುದು ಮೂಡಣದಿ
ಮಧುರ ಮಂದಾನಿಲ ಬಂದಿಹನು ನಮಿಸಿ ನಲಿದಿಹನಮ್ಮ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೫ ॥

ಗಿರಿಕಂದರಗಳ ಸಾಲಿನಲಿ ಮೊಳಗಿಹುದು ಅಮರಗಾನತರಂಗ
ದಿಗ್ದಿಗಂತದಲೆಯಲ್ಲಿ ತೇಲಿಬರುತಿಹುದೋಂಕಾರನಾದ
ಯೋಗನಿದ್ರೆಯನುಳಿದು ಬಾ ತಾಯೆ ವಿಷ್ಣುಚಿತ್ತ ಕರಕಮಲಸಂಜಾತೆ
ಶ್ರೀಚಕ್ರನಿಲಯೆ ಪದ್ಮಾನನೆ ಪದ್ಮದಳಾಯತಾಕ್ಷಿ ಭಾರತಿಯೆ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೬ ॥

ಕರದಿ ವೀಣೆಯ ಪಿಡಿದು ತಂಬುರರು ಹಾಡಿಹರು ಭಕುತಿಯಲಿ
ಮಿಡಿದಿಹುದೋಂಕಾರನಾದ ಕೇಳಮ್ಮ ನಾದನಾದತರಂಗ ನಾದಮಯಿ
ಸಕಲ ಸುರಮುನಿಗಳಾತುರದಿ ನಿಂದಿಹರು ನಿನ್ನ ದರುಶನಕೆಂದು
ಯೋಗ ನಿದ್ರೆಯಿಂದೆದ್ದು ಬಾ ತಾಯೆ ಕನಕಲಕ್ಷ್ಮಿ ನರಹರಿಯ ಅರಗಿಣಿಯೆ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೭ ॥

ತರುರಾಜಿ ಮಿಂದು ಕನಕ ಕಿರಣದಿ ಕೂಗಿಹುದು ಸಂತಸದಿ
ಹೂವನಡೆಮುಡಿಯ ಹಾಸಿಹುವು ನೀ ಬರುವ ದಾರಿಯಲಿ
ಸಿರಿಮೊಗದಿ ನಲಿದಿಹುದು ಹೂ ಸಿರಿಯ ಸೊಬಗಿನಲಿ ತರುಲತೆಯು
ನಿನ್ನ ದರುಶನ ಭಾಗ್ಯವಹುದೆಂದು ತೂಗಿಹುದು ವನರಾಜಿ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೮ ॥

ಭಕ್ತಿಯಮುನೆಯ ಧಾರೆ ಧಾರೆಯ ಕೇಳಮರಮುನಿಗಳ ಸಿರಿಕಂಠದಲಿ
ಸಿಂಧುಗಂಗೆಯರ ತಟದಲ್ಲಿ ಕರವೆತ್ತಿ ಸ್ತುತಿಸಿಹರು ಶಬ್ದಾತ್ಮಿಕಾಸುವಿಮಲರ್ಘ್ಯಜುಷಾಂ ನಿಧಾನ
ಮದ್ಗೀಥರಮ್ಯ ಪದಪಾಠವತಾಂ ಚ ಸೌಮ್ಯಾಮ್
*ದೇವೀತ್ರಯೀ ಭಗವತೀ ಭವಭಾವನಾಯ ವರ್ತಾಚಸರ್ವ ಜಗತಾಂ ಪರಮಾರ್ತಿಹಂತ್ರೀ*
ಲೋಕಮಾತೆಯೇ ಶ್ರೀಲಲಿತೆ ಅಲಮೇಲುಮಂಗ
ಶ್ರೀ ಶ್ರೀನಿವಾಸನರಗಿಣಿಯೆ ಮುಕ್ತಿದಾಯಕಿಯೆ ಮಂಗಳೆಯೆ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೯ ॥

ಕಪಿಲೆ ಕಾವೇರಿ ಗಂಗೆತುಂಗೆಯರ ಕಾವ್ಯಧಾರೆಯನು ಕೇಳಮ್ಮ
ನಿನ್ನ ಪಾದಪದುಮ ಸ್ಪರ್ಶಕಾತುರದಿ ಹರುಷ ಪುಲಕಿತರಾಗಿ ನಲಿದಿಹರು
ನೋಡಮ್ಮ ದೇವಗಂಧರ್ವ ಸರಪತ್ತಿದಳೈದಿಹರು ತಾಳವಾದ್ಯಗಳೊಡನೆ
ಸುರಪತಾ ತಂದಿಹನು ಪಾರಿಜಾತ ಪುಷ್ಪರಾಶಿಯ ಮಾತೆಗೆಂದೆನುತ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥ ೧೦ ॥

ಸಿಂಧು ಗಂಗಾಲಕನಂದಾ ತೀರ್ಥಗಳ ಪೂರ್ಣ ಕುಂಭಗಳೊಡನೈದಿಹರು
ಕ್ಷೀರ ಕುಂಭಗಳ ಪೊತ್ತು ನಿಂದಿಹರು ಭಕುತ ಜನರಮಿತದಲಿ
ದಧಿಕ್ಷೀರ ಶುದ್ಧೋದಕದಭಿಷೇಕ ಮಾತೆ ನಿನಗೆಂದು ಭಕುತಿಯಲಿ
ಸೇವೆಯನು ಸ್ವೀಕರಿಸಿ ವರವ ನೀನೀಡುಬಾ ತಾಯೆ ಶ್ರೀನಿಲಯೆ
**ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ** ॥ ೧೧ ॥

ನವನಿಧಿಗಳುನ್ನತದ ರತ್ನಗಳ ನಿನ್ನ ಪದತಲಕರ್ಪಿಸಲು ಮುದದಿ
ಬಂದಿಹನು ಯಕ್ಷೇಶ್ವರೇಶ್ವರನು ಯಕ್ಷ ಕಿನ್ನರ ಗಂಧರ್ವರೊಡಗೂಡಿ
ಗಂಧರ್ವ ಗಾನಾಮೃತವು ತುಂಬಿಹುದೀರೇಳು ಲೋಕದಲಿ
ಮಾತೆ ನೀಡೀಜಗಕೆ ನಿನ್ನೊಂದು ಕರುಣಾಕಟಾಕ್ಷ ಚಂದ್ರಸೋದರಿಯೇ
**ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ** ॥ ೧೨ ॥

ಯೋಗನಿದ್ರೆಯಲಿಹ ಶೇಷಶಯನ ಚೆಲುವ ನಾರಾಯಣನು
ಎಚ್ಚರಿಸಲೇಳಮ್ಮ ಜಗನ್ನಾಥನನು ಮೆಲ್ಲಮೆಲ್ಲನೆ ಮಗಳೇ
ಎಂದೈದಿಹನು ನಿನ್ನ ಪಿತ ರತ್ನಸಾಗರನು ರತ್ನಾಭರಣ ತಂದಿಹನು
ಕಲಶ ಕನ್ನಡಿ ಸಹಿತ ಸುಂದರನನೆಬ್ಬರಿಸಲೇಳಮ್ಮ ಭಾರತಿಯೆ
**ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ** ॥ ೧೩ ॥

ಬಂದಿಹರೆಲ್ಲ ದೇವ ಕನ್ನೆಯರಮಿತದಲಿ ನಿನ್ನ ಸೇವೆಗಾತುರದಿ
ನಿನ್ನೊಂದು ಕರುಣಾ ಕಟಾಕ್ಷ ಕೆಳಸಿಹರು ಬಾಳು ಬೆಳಗುವಿಯೆಂದು
ಸಪ್ತಾದ್ರಿವಾಸನೇಳುವ ಮುನ್ನ ನಿನ್ನ ಸಿಂಗರಿಸಲೈದಿಹರು
ಜಾಜಿ ಸಂಪಿಗೆ ಮರುಗ ಮಲ್ಲೆಯ ಮಾಲೆಗಳ ತಂದಿಹರು
**ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ** ॥ ೧೪ ॥

ಸುರಭಿಗಳತಿಶಯದ ಕೊರಳ ಘಂಟಾನಾದವನು ಕೇಳಮ್ಮ
ಕೇಳು ನವಿಲು ಕೋಗಿಲೆ ಕಾಜಾಣಗಳ ಗಾನಾಮೃತವ
ಸುರಮುನಿಗಣವಂದಿತಳೆ ಸುರಗಣಾಧ್ಯಕ್ಷೆ ಶ್ರೀತುಳಸಿವನ ಸಂಜಾತೆ
ಸರ್ವ ಮಂಗಳೆಯೆ ಮುಡಿದ ಮಾಲೆಯನಿತ್ತು ಸುಂದರನ ಪಡೆದವಳೆ
**ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ** ॥ ೧೫ ॥

ಸನಕಸನಂದರ್ಬೈದಿಹರು ಸಪ್ತಋಷಿಗಣ ಸಹಿತ ದರ್ಶನಕೆ ತಾಯೆ
ಕೇಳು ಸುಮಧುರ ವೇದಘೋಷಗಳ ಮಾಲೆ ಮಾಲೆ

*ಲಕ್ಷ್ಮೀಂ ಕ್ಷೀರ ಸಮುದ್ರರಾಜ ತನಯಾಂ ಶ್ರೀ ರಂಗಧಾಮೇಶ್ವರೀಂ*
*ದಾಸೀಭೂತ ಸಮಸ್ತ ದೇವವನಿತಾಂ ಲೋಕೈಕ ದೀಪಾಂಕುರಾಂ*
*ಶ್ರೀಮನ್ ಮಂದ ಕಟಾಕ್ಷ ಲಬ್ದ ವಿಭವ ಬ್ರಹ್ಮೇಂದ್ರ ಗಂಗಾಧರಾಂ*
*ತ್ವಾಂ ತ್ರೈಲೋಕ್ಯ ಕುಂಟುಂಬಿನೀಂ ಸರಿಸಜಾಂ ವಂದೇ ಮುಕುಂದ ಪ್ರಿಯಾಂ*

ದೇವಿ ಬಕುಳೆಯ ಕಂದನ ದರುಶನ ನೀಡೆಮಗೆ
ಏಳಮ್ಮ ತಾಯೆ ತ್ರಿಭುವನೇಶ್ವರಿಯೆ ಸಿರಿವಾರಿಜಾತೆ

*ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ* ॥ ೧೬ ॥

ಅಷ್ಟದಿಗ್ಗಜಗಳೈದಿಹುವು ಐರಾವತದೊಡಗೂಡಿ ಘೀಳಿಟ್ಟು
ನಿನ್ನ ಚರಣಧೂಳಿಯ ಸ್ಪರ್ಶಕಾತುರದಿ ಕೂಗಿಹುವು ಕಂದಮ್ಮಗಳು
ಮಂದಮಾರುತನೈದಿಹವು ಕಮಲ ಕಲ್ಹಾರ ಪುಷ್ಪ ಪರಿಮಳದಿ
ಯೋಗನಿದ್ರೆಯಿಂದೆದ್ದು ಬಾತಾಯೆ ಯೋಗಿಯೋಗೇಶ್ವರಿಯೇ

*ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ* ॥ ೧೭ ॥

ಚತುರ್ಮುಖನೈದಿಹನು ಬೃಹಸ್ಪತಿಯ ಜೊತೆಗೂಡಿ
ಸ್ತುತಿಸಿಹನು ನಿನ್ನನೋ ಮಾತೆ ಪಿತನ ದರುಶನಕೆಂದು
ಶಾರದೆಯು ತಾನುಡಿಸಿಹಳು ಮುನಿಸತಿಯರೊಡನೆ ವೀಣೆಯನು
ತಂದಿಹರು ಪರಿಪರಿಯ ಪುಷ್ಪಗಳ ತೋಮಾಲೆಗಳ ಸ್ವೀಕರಿಸಮ್ಮ

*ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ* ॥೧೮॥

ನಂದಿವಾಹನನೈದಿಹನು ಸತಿಯೊಡನೆ ಜಂಗಮಗಣಸಹಿತ
ಏಳಮ್ಮ ಸಹೋದರಿಯೆ ಏಳಮ್ಮ ಶ್ರೀ ಶ್ರೀನಿವಾಸನರಗಿಣಿಯೆ
ವಲ್ಮೀಕಾಲಯನ ಕರುಣಾ ಕಟಾಕ್ಷವನು ಜಗಕೆ ನೀಡೆಂದು
ಕೂಗಿ ಕರೆದಿಹನು ನುಡಿಸಿಹನು ಮಧುರ ಡಮರುಗವ ಕೇಳಮ್ಮ

*ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ* ॥೧೯॥

ಯತಿರಾಜನೊಲುಮೆಯ ಜಗಕೆ ಕೊಡಿಸುಲನುವಾಗು
ಚೆಲುವ ಚೆನ್ನಿಗ ನೇಳುವ ಮುನ್ನವೇ ಸಿಂಗರಿಸಿಕೋ ಬಾತಾಯಿ
ಸೃಷ್ಟಿ ಸ್ಥಿತಿಲಯ ಕಾರಣಳೆ ಜಗನ್ಮಾತೆ ಮಾತೆಮಾತೆಯರ ಮಾತೆ
ಸರ್ವಾರ್ಥ ಸಿದ್ಧಿದಾಯಕಿಯೆ ಭಾರತಿಯೆ ಸತ್ಯಶಾಮಲೆಯೆ

*ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ* ॥೨೦॥

ಯೋಗನಿದ್ರೆಯಿಂದೆದ್ದು ಬಾತಾಯೆ ಶರಣಾಗತ ವತ್ಸಲಯೆ
ಕೃಪಾಸ್ಸಿಂಧು ಸಿಂಧುರಾಜತನಯೆ ಶ್ರೀ ಮಹಾಲಕ್ಷ್ಮಿಯೆ
ಸಕಲಲೋಕದ ಬೆಳಕೆ ಜ್ಞಾನವೈರಾಗ್ಯದಾಯಕಿಯೆ
ಮಮತೆಯಾ ಮೂರುತಿಯೆ ಸ್ವತಗಿರಿ ಗೋಪೆಯನಪೃತ್ಕಮಲನಿಲಯೇ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥೨೦॥

ಸ್ವೀಕರಿಸಮ್ಮಾ ನಾರಿಕೇಳ ಕದಳೀಫಲ ಕಲ್ಲುಸಕ್ಕರೆ
ಕನಕಾಂಬರಳೆ ಕಮಲಾಕ್ಷಿ ಕ್ಷೀರಾಬ್ಧಿತನಯೆ ಕಾರುಣ್ಯೆ
ಸುಮಧುರ ಕ್ಷೀರದ್ರಾಕ್ಷದಾಳಿಂಬೆ ಅರ್ಪಿಸಿಹೆ ನಿನಗಮ್ಮ
ಸ್ವೀಕರಿಸಿ ಹರಸು ಬಾತಾಯೆ ಹರುಷದಲಿ ಜ್ಞಾನವೈರಾಗ್ಯಸಿದ್ಧಿದಾಯಕಿಯೆ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥೨೧॥

ಶಿರವಬಾಗಿ ಕರಮುಗಿದು ನಿಂದಿಹರು ತಾರಾಧಿಪರು
ರತ್ನಕಾಂತಿಯಲಿ ಬೆಳಗಿಹುದು ವೈಕುಂಠ ತಾನಾಯ್ತು ಯಾದವಾದ್ರಿ
ಮುತ್ತಿನಾರುತಿ ಬೆಳಗಿ ಕಾದಿಹರು ಮಾತೆಯರೆಲ್ಲಾ ಮಮತೆಯಲಿ
ಸರಸಿಜಾಕ್ಷಿಯೆ ಸಂತಾನಲಕ್ಷ್ಮಿಯೆ ನಿನ್ನಂಘ್ರಿಗಳ ದರುಶನವ ನೀಡಿ ಸಲಹಮ್ಮ
***ಸುಪ್ರಭಾತವು ಮಾತೆ ಕ್ಷೀರಾಬ್ಧಿತನಯೆ ಯದುಶೈಲನಿಲಯೆ*** ॥೨೩॥

ಜಯತುಜಯ ಮಂಗಳೆಯೆ ಜಗನ್ಮಾತೆಯೆ ಆದಿಮದ್ಯಾಂತರಹಿತೆ
ಜಯತುಜಯ ಸಂತಾನ ಲಕ್ಷ್ಮಿಯೆ ಆದಿಲಕ್ಷ್ಮಿಯೆ ವಿಜಯ ವೀರಲಕ್ಷ್ಮಿಯೆ
ಜಯತುಜಯ ಗಜಲಕ್ಷ್ಮಿ ಸಕಲ ಸಂತಾನ ಸಂಪದ ಧನದಾನ್ಯದಾತೆ
ಜಯತುಜಯ ಸಕಲೈಶ್ವರ್ಯ ಲಕ್ಷ್ಮಿಯೆ ಶ್ರೀವೈಷ್ಣವೀಮಾತೆ
ಜಯತುಜಯ ಕ್ಷೀರಾಬ್ಧಿತನಯೆ ಶ್ರೀ ಮಹಾಲಕ್ಷ್ಮಿಯೇ
ಜಯತುಜಯ ದಾಸಗೋಪಾಲನಾಮಾತೆ ಯದುಶೈಲನಿಲಯೆ ॥೨೪॥

ಮಂಗಳವು ಶುಭಮಂಗಳವು ಶ್ರೀರಂಗನಾಯಕಿಗೆ ಕ್ಷೀರಾಬ್ಧಿತನಯಗೆ
ಮಂಗಳವು ಶುಭಮಂಗಳವು ಶೂಡಿಕುಡುತ್ತಾ ತಾಯಾರು ಸನ್ನಿಧಿಗೆ
ಮಂಗಳವು ಶುಭಮಂಗಳವು ಧರಣಿಜಾತೆಗೆ ರಾಮನರಗಿಣಿಗೆ
ಮಂಗಳವು ಶುಭಮಂಗಳವು ದಾಸಗೋಪಾಲನಾ ಮಾತೆ ಸೀತೆಗೆ

***ಮಂಗಳವು ಶುಭ ಮಂಗಳವು ಅಲಮೇಲು ಮಂಗಳಾಂಗಿಗೆ***
***ಮಂಗಳವು ಶುಭ ಮಂಗಳವು ಯದುಶೈಲನಾಥನರಸಿ ಶ್ರೀ ಮಹಾಲಕ್ಷ್ಮಿಗೆ॥***

***॥ ಭದ್ರಂ ಶುಭಂ ಮಂಗಳಂ ॥***

ಶ್ರೀಮಾತೆ ರಾಮಾನುಜಾಯ ನಮಃ

# ಶ್ರೀ ಯದುಶೈನಾಥ ಸ್ತೋತ್ರಂ

ಶಿರಬಾಗಿ ನಮಿಸುವೆನು ತಿರು ನಾರಾಯಣನರಸಿ
ಶ್ರಿತಜನಪ್ರಿಯ ದಾನಶೀಲೆ ಜಗನ್ಮಾತೆ ಯದುಶೈನಿಲಯೆ
ಶರಣು ನಿನ್ನಡಿದಾವರೆಗಳಿಗೆ ಕಮಲಾ ಕಮಲ ದಳಾಯುತಾಕ್ಷಿ
ಶರಣುಶರಣಮ್ಮಾ ತಾಯೆ ಶರಣರಾ ಭಾಗ್ಯನಿಧಿಯೇ
*ಸ್ವೀಕರಿಸಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥನರಸಿಯೇ ಶ್ರೀ ಮಹಾಲಕ್ಷ್ಮೀ* ॥೧॥

ಶರಣು ಶರಣೆಂದೆ ಜದಾದಿಜಳೆ ತಾಯೆ ಭಾರತಿಯೆ
ಶರಣುಶರಣೆಂದೆ ವೇದ ಮಾತೆಯೇ ವೇದಾಕ್ಷರಾತ್ಮಳೆ
ಶರಣಮ್ಮ ಪ್ರಸನ್ನ ಮುಖ ಚಂದ್ರ ಮಂಡಲೆಯೆ
ಶಂಭುಶಿವ ಶಂಕರನ ಸೋದರಿಯೆ ನಾರಾಯಣಿಯೆ
*ಸ್ವೀಕರಿಸಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥನರಸಿಯೇ ಶ್ವೇತಾಂಬರಳೇ ಶ್ರೀ ಮಹಾಲಕ್ಷ್ಮೀ* ॥೨॥

ಕಾವುದೆಮ್ಮನು ಆದಿ ನಾರಾಯಣಿಯೆ ಆದಿಮದ್ಯಾಂತರಹಿತಳೇ
ಮಾತೆ ಮಾತೆಯರ ಮಾತೆ ಕ್ಷೀರಸಾಗರ ತನಯೆ ವೇದಮಾತೆಯೆ
ಸರ್ವ ಶಕ್ತ್ಯಾತ್ಮಿಕೆಯೆ ಸಕಲಾಗಮಸಾರ ಸನ್ನುತಳೆ ಭಾರತಿಯೆ
ಪರಮ ಕಲ್ಯಾಣಿ ದ್ವಾದಶಾತ್ಮ ಜ್ಯೋತಿರೂಪಿಯೆ
*ಸ್ವೀಕರಿಸಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥನರಸಿಯೇ ಸುರೇಂದ್ರ ವಂದಿತ ಚರಣೆ ಜಗನ್ಮಾತೆ* ॥೩॥

ಬಾ ತಾಯೆ ಕಂದರಾ ಮೊರೆಯನಾಲಿಸು ಬಾ ತಾಯೆ ಕಮಲಾಕ್ಷಿ
ನಿಮ್ಮನುಪಮಾಕೃತಿಯ ದರುಶನವ ನೀಡುತಭಯವನು ನೀಡಮ್ಮ
ಸಿರಿರಮಣಾ ಮದದನ್ನೆ ಜ್ಞಾನಗಮ್ಯಳೇ ಜ್ಞಾನವೈರಾಗ್ಯ ಸಿದ್ಧಿದಾಯಕಿಯೆ
ಸುಪ್ರಭಾತವನು ನೀಡಿಳೆಗೆ ಆನಂದಮಯಿ ತಾಯೆ ಸಸ್ಯಶ್ಯಾಮಲೆಯೆ
*ಸ್ವೀಕರಿಸಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥನರಸಿಯೇ ಅಂಬುಜಾಸನನ ಮಾತೆ ಜನಗನ್ಮಾತೆ* ॥೪॥

ಸುಪ್ರಭಾತವು ಶರಧಿಸುತೆ ಸುರಾಗ್ರಗಣ್ಯೆ ಭಕ್ತಜನಾಶ್ರಯಳೆ
ನಾಗಶಯನನುಪಮಾಕೃತಿಯ ದರ್ಶನ ನೀಡೆಮೆಗೆ
ಜ್ಞಾನಾಮೃತ ವಾರಿಧಿಯೆ ವಿಶ್ವಮಾತೆಯೆ ಸರಸಿಜಾಕ್ಷಿ
ಅಮರೇಂದ್ರ ವಂದಿತ ಚರಣೆ ಅತೀಂದ್ರಿಯಳೆ ಆದಿನಾರಾಯಣಿಯೆ
*ಸ್ವೀಕರಿಸಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥನರಸಿಯೇ ಮಾಧವನ ಮನದನ್ನೆ ಜಗನ್ಮಾತೆ* ॥೫॥

ಜಯತುಜಯ ಶ್ರೀರಂಗ ರಂಗ ಕಸ್ತೂರಿ ರಂಗ
ಜಯತುಜಯ ಶೇಷಶಯನನೇ ಶ್ರೀಹರಿಯೇ ಕಾವೇಟಿರಂಗ
ಜಯತುಜಯ ಮಾಮನೋಹರನೇ ವಲ್ಮೀಕಾಲಯ ನಿಲಯ
ಶರಣು ಶರಣೆಂದೆ ಲೋಕೈಕನಾಥ ಲೀಲಾವತಾರಿ ಅಸುರಾರಿ
***ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ॥೬॥

ಬಂಗಾರದಾರುತಿ ಜ್ಯೋತಿ ತಾನಾಗಿ ಮೂಡಿಹನು ರವಿತಾನು
ನಮಿಸುಹನು ನಿನ್ನ ಪಾದ ಪದುಮಕೆ ಕೇಳು ಪಕ್ಷಿಗಾನಾಮೃತವ
ನಡೆಮುಡಿಯ ಹಾಸಿಹನು ಕನಕವರ್ಣನು ಯೋಗನಿದ್ರೆಯಿಂದೇಳು
ಶರಣಾಗತ ವತ್ಸಲನೆ ಪಾಲ್ಗಡಲ ಶಯನ ಪರಮ ಪಾವನಚರಣ
***ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ॥೭॥

ಮುದದಿ ಹೊಂಗಿರಣದೊಳ್ಮಿಂದು ನಿಂದಿಹುವು ಜೀವರಾಶಿಗಳೆಲ್ಲಾ
ರಾಗಮಾಲಿಕೆಯುಲಿದು ನಡೆಮುಡಿಯಹಾಸಿಹುದು ವನರಾಜಿ
ಸರಸಿಜಾಕ್ಷನೆ ಸಿರಿರಮಣ ದರುಶನವ ನೀಡೆಂದು ಬೇಡಿಹುದು
ಶ್ರೀಮುಖದ ದರ್ಶನವ ನೀಡಿ ಹರಸುಬಾ ಓಂಕಾರನಾದಾತ್ಮ
***ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ॥೮॥

ಮುತ್ತುಮಾಣಿಕದುಡೆಯುಟ್ಟು ಭೂದೇವಿ ನಲಿದಿಹಳು
ಧ್ವನಿಸುತಿದೆ ಓಂಕಾರ ನಾದ ಗಿರಿ ಗುಹ್ವರದಿ ಪದುಮನಾಭನೆ
ನವಿಲುಕೋಗಿಲೆಯಾಗಿ ಕೂಗಿಕರೆದಿಹಳಯ್ಯ ಭಾರತಿಯು
ನಿನ್ನ ಚರಣ ಕಮಲಗಳ ದರ್ಶನವ ನೀಡಿಳೆಗೆ ಸುವ್ರತನೆ ಸುಗುಣ
***ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ॥೯॥

ನಿನ್ನ ಕರುಣೆಯ ಪಾದಧೂಳಿಯಬಯಸಿ ಕಾದಿಹುದು ಈ ಜಗವು
ಉದಯಗಾನಾಮೃತದಿ ಧ್ವನಿಸುತಿದೆ ವೇದಾದ್ರಿ ಗಿರಿಶಿಖರ
ವೇದ ಕುಸುಮಾಂಜಲಿಯ ಸಲಿಸಿಹರು ವೇದ ಕೋವಿದರು ಕೇಳಯ್ಯ
***ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷ ಸಹಸ್ರಪಾತ್***
***ಸಭೂಮಿಂ ವಿಶ್ವತೋವೃತ್ವಾ ಅತ್ಯಧಿಷ್ಠಾಂಗುಲಂ***
ಶರಣು ನಿನ್ನಡಿಗಳಲಿ ಅರವಿಂದ ದಳಯತಾಕ್ಷ ಗರಡುಧ್ವಜನೆ
***ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ॥೧೦॥

ಮತ್ಸ್ಯರೂಪವ ತಾಳ್ದು ವೇದಗಳ ತಂದವನೆ ವೇದಾಂತರಾತ್ಮ
ವಾತ್ಸಲ್ಯವಾರಿಧಿಯೆ ಅಪ್ರಮೇಯನೆ ಮಹಾಬಲನೆ
ಮಮತೆಯಾ ಮೂರುತಿಯೆ ಹೃಷಿಕೇಶ ಹಯವದನ ಶ್ರೀಹರಿಯೆ
ಪುಣ್ಯ ಶ್ರವಣ ಕೀರ್ತನನೆ ವಿಶ್ವಾದಿಮೂಲ ವಿಮಲಚರಿತನೇ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ||೧೧||

ಸುರರಿಗಮೃತವಿತ್ತ ಮಂದರ ಗಿರಿಧಾರಿ ಧರ್ಮವಿದುತ್ತಮನೆ
ಶ್ರೀರಮಣ ಕೂರ್ಮಾವತಾರಿ ಮಹೋತ್ಸಾಹ ಮಹನೀಯ
ಶ್ವೇತಪದ್ಮಧರ ಶೇಷಶಯನನೇ ಶ್ರೀಹರಿಯೇ ಶ್ರೀ ಶ್ರೀನಿವಾಸ
ಮಹಾಬಲನೆ ಸರ್ವಾಸುನಿಲಯ ಸರ್ವಕಾಮದ ಸರಸಿಜಾಕ್ಷ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ||೧೨||

ಭುವಿಯ ಕರದಿಯಿಂದೆತ್ತಿ ಒಲವಿನಲಿ ಕಾಯ್ದವನೆ ಸುರಧೇನುವೇ
ವರಹಾರೂಪಿಯೇ ಸತ್ಯಧರ್ಮ ಪರಾಕ್ರಮಿಯೇ ಶೃತಿಸಾಗರನೆ
ದಾನವಾಂತಕನೆ ಶ್ರೀರಂಗರಂಗ ಜಗನ್ನಾಥ ಶತೃತಾಪನನೇ ದೇವ
ಕಾಂತಾಯ ಕಾಮಧೇವಾಯ ಕಮನೀಯಗಗಣನೇತ್ರ ಚತುರ್ಭುಜನೇ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ||೧೩||

ಕಂದನೊಲವಿನ ಕರೆಗೆ ಓಡೋಡಿ ಬಂದವನೆ ನರಹರಿಯೆ ನಖಾಯುಧನೆ
ವೀರ ನರಸಿಂಹ ಜಗದೇಕ ಸಿಂಹ ಕಾವುದೆಮ್ಮನು ಕರುಣೆಯಲಿ
ಭಕ್ತ ವತ್ಸಲನೆ ಪ್ರಹ್ಲಾದ ವರದ ನಾರಾಯಣನೆ ನಂದನಂದನನೆ
ಅರ್ತತ್ರಾಣ ಪಾರಾಯಣನೆ ಸತ್ಯ ಸಂಕಲ್ಪ ಸತ್ಯಸುಂದರನೆ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ||೧೪||

ಮೂರಡಿಯ ಯಾಚಿಸುತಲೈತಂದು ಬಲಿಯ ಗೆಲಿದವನೆ
ಮೂಜಗವ ನೀನಳೆದೆ ವಾಮನನೆ ತ್ರಿಪದ ತ್ರಿವಿಕ್ರಮನೆ
ಯೋಗನಿದ್ರೆಯಿಂದೆದ್ದು ಬಾ ತಂದೆ ನಾರಾಯಣನೆ
ಶಿರಬಾಗಿ ನಮಿಸುವೆನು ನಿನ್ನ ಚರಣಾಂಬುಜಕೆ ಏಕಾಕ್ಷರನೆ ಕೇಶವನೆ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ||೧೫||

ಅಭಯ ಹಸ್ತದಿ ಸಲಹಿ ಸಾಧುಸಜ್ಜನರ ಪೊರೆದವನೆ ಭಾರ್ಗವನೆ
ಗರ್ವಿತರ ಸಂಹರಿಸುತೈತಂದ ಪರಶುಧಾರಿಯೆ ವೀರಬಾಹುವೇ
ಭಾರ್ಗವನೆ ಭಾಗವತೋತ್ತಮನೆ ಸುಭುಜ ಸುಪ್ರಸನ್ನಾತ್ಮ
ಶುಭೋದಯವ ನೀಡಿಳೆಗೆ ಶುಭಾಂಗ ಶೂರನಾರಾಯಣನೆ ಶೂರಜನೇಶ್ವರನೆ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ||೧೬||

ಸ್ತುತಿಸಿಹುದು ಸನಕಸನಂದಾದಿ ಮುನಿವೃಂದ ಮುದದಿಂದ
ನಿತ್ಯ ಶುಭದಾಯಕನೆ ಯೋಗಿ ಯೋಗಿಜನಹೃನ್ಮಾನಂದ
ಕೌಸಲ್ಯಾತನಯನೇ ರಘುವಂಶ ಲಲಾಮ ರಣಧೀರ ಶ್ರೀರಾಮ
ನೀಲಮೇಘಶ್ಯಾಮ ಸಕಲಮುನಿಜನ ಮಾನಸ ರಾಜಹಂಸ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ॥೧೭॥

ವಿಶ್ವಾಮಿತ್ರ ಪ್ರಿಯಧನನೆ ಯಾಗಯಜ್ಞ ಸಂರಕ್ಷಕನೆ
ತಾಟಕಾದಿ ನಿಶಾಚರ ವಿನಾಶಕರನೇ ರಾಕ್ಷನಾಂತಕನೆ
ದಶಕಂಠ ಮರ್ದನನೆ ದಶರಥಾತ್ಮಜನೆಧನುಜ ವಿರಾಮ ಶ್ರೀರಾಮ
ಅಹಲ್ಯಾ ಶಾಪವಿಮೋಚನನೆ ಪಾವನಚರಣಾ ಪರಮಪರಂಧಾಮ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ॥೧೮॥

ಶುಭೋದಯವು ಧರಣಿಜಾ ರಮಣ ಪ್ರಕಾಶಾತ್ಮ
ಲೋಕೈಕ ರಾಮ ಲೋಕಾಭಿರಾಮ ಲೀಲಾ ಮಾನುಷರೂಪ
ಸುಗುಣಸುಪ್ರಸನ್ನಾತ್ಮ ಸುರಾಸುರ ವಂದಿತನೆ ಮಾಧವನೆ
ಸಕಲ ಲೋಕದ ಬೆಳಕೆ ಪಾವನಚರಣ ಜಾನಕೀನಾಥ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ॥೧೯॥

ಶಿರಬಾಗಿ ನಮಿಸುವೆನು ಆನಂದಗುಣ ನಿಲಯ ಆದಿ ಲಕ್ಷ್ಮೀರಮಣ
ಚರಣ ಭಜಕರ ಕಾಯ್ವ ಚೆಲುವ ಚನ್ನಿಗನೆ ಸಾರಂಗಧರನೇ
ಶರಣು ನಿನ್ನಡಿಗಳಲಿ ಪಿತೃವಾಕ್ಯ ಪರಿಪಾಲಕನೆ ಭರತಾಗ್ರಜನೆ
ಶರಣು ಸತ್ಯಸುಂದರ ಸತ್ಯವ್ರತನೆ ಸತ್ಕರ್ತ ಗೋವಿಂದ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ॥೨೦॥

ಮುಖ್ಯ ಪ್ರಾಣಾಂತರ್ಗತನೆ ಸುಗ್ರೀವ ಸಖನೇ
ಕೋದಂಡಪಾಣಿಯೇ ಧನುಜ ವಿರಾಮ ಶ್ರೀರಾಮ
ನೀಲಮೇಘಶ್ಯಾಮ ನಿತ್ಯ ನಿರ್ಮಲಾನಂದ ಆನಂದ
ತಾರಕಾ ನಾಮ ಶಶಾಂಕ ವದನನೇ ಶ್ರೀ ವಿಷ್ಣುವೇ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ॥೨೧॥

ನಂದನಂದನನೇ ಗೋಪಾಲ ಗೋವಿಂದ ವನಮಾಲಿ
ಶರಣು ಬೃಂದಾವನಾನಂದ ಮುಚುಕುಂದ ವರದ
ಪೂತನೀ ಕಾಳಿಂಗ ಮರ್ದನನೆ ರಾಧಾ ಮನೋವಿಹಾರಿ
ವಿಧುರಾಕ್ರೂರ ವರದ ಆನಂದ ಗುಣನಿಲಯ ಮಧುಸೂದನನೆ
*ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು*
*ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ* ॥೨೨॥

ಮಣ್ಣು ತಿಂದಿಹನಮ್ಮ ಬಾಲಗೋಪಾಲ ಎಂದಣ್ಣನೆಂದಾಗ
ಮಾತೆಗೊಲವಿಂದ ಬಾಯಲ್ಲಿ ಬ್ರಹ್ಮಾಂಡವನೆ ನೀತೋರ್ದೆ
ಮಾತೆಮಡಿಲಲಿ ನೀ ನಲಿದೆ ವಟಪತ್ರ ಶ್ಯಾಯಿಯೇ
ನಮಿಪೆ ನಿನ್ನಡಿಗಳಲಿ ಶ್ರೀ ತುಳಸಿ ವನಮಾಲಿ ತ್ರಿವಿಕ್ರಮನೆ
***ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ||೨೩||

ದ್ರೌಪದಿಯ ಮೊರೆಕೇಳಿ ನೀ ಕಾಯ್ದೆ ಭಕ್ತಬಾಂಧವನೆ
ವಿದುರನಾಲಯದಿ ಕ್ಷೀರಧಾರೆಯ ಹರಿಸಿದೆಯೋ
ವೃಷ್ಣಿವಂಶಪ್ರದೀಪ ದೀನಜನ ಮಂದಾರ ಧೀರಗೋಪಾಲ
ಕ್ಷೀರವಾರಿಧಿಶಯನ ಲೀಲಾವತಾರಿ ವೇದಪುರುಷ ವಾಮನನೆ
***ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ||೨೪||

ನಾರದಾದಿ ಮುನಿಜನವಂದ್ಯ ಕಸ್ತೂರಿ ತಿಲಕ ಮಾಮನೋಹರನೆ
ವೇದನಾದಾತೀತ ಬೌದ್ಧಕಲ್ಕಿಯೇ ಕರಿರಾಜವರದ
ಶ್ರೀರಮಣ ಶ್ರಿತಜನಪಾಲ ಶ್ರೀ ವೇಣುಗೋಪಾಲ
ಶ್ರೀವೈಷ್ಣವ ಸತತಮರ್ಚಿತ ಪಾದಪದ್ಮ ಶ್ರೀಧರನೆ
***ಸ್ವೀಕರಿಸೆಮ್ಮ ಭಕ್ತಿಕುಸುಮಾಂಜಲಿಯ ಸೇವೆಯನು***
***ಯದುಶೈಲನಾಥ ತಿರುನಾರಾಯಣನೆ ಯತಿರಾಜ ವರದ*** ||೨೫||

ಸನಕಸನಂದಾದಿ ಮನಿಮಾನಸ ರಾಜಹಂಸ ಅನಂತಾನಂತ
ಆದಿಕೇಶವನೆ ವಿಠಲ ವಿಶ್ವ ವಂದಿತ ಚರಣ ಸಾರಂಗಧರನೆ
ವೀರನಾರಾಯಣನೆ ವಿಭುದ ವಂದಿತ ಚರಣ ವಿಶ್ವಾತ್ಮ
ವಲ್ಮೀಕಾಲಯ ನಿಲಯ ವೇದಾದ್ರಿವಾಸ ಹೃಷೀಕೇಶನೆ
***ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು***
***ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ*** ||೨೬||

ಒಲವಿನಿಂದಿತ್ತ ಹಾಲಿನಿಂ ಹುಸಿಹಸಿವ ನೀ ಕಳೆದೆ ನಗುನಗುತ
ಕರುಣೆಯಾ ಹೊಳೆ ಹರಿಸಿ ನೀನೊಲಿದೆ ವಿಧುರಂಗೆ
ತಿಳಿಯದಾದರು ನಿನ್ನಾದಿಯನು ವೇದವೇದಾಂತಕೋವಿದರು
ಪಾರ್ಥ ಸಾರಥಿಯೆ ಗೀತಗೋವಿಂದ ಪದ್ಮನಾಭನೆ ಗೋಪಾಲ
***ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು***
***ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ*** ||೨೭||

ಯುಗಯುಗದಿ ನೀ ಬಂದೆ ಪರಿಪರಿಯ ರೂಪಿನಲಿ
ಯೋಗನಿದ್ರೆಯಿಂದೇಳು ಧರ್ಮರಕ್ಷಕನೆ ವಿಶ್ವಾತ್ಮ ವಿಶ್ವರೂಪಿಯ
ಸಲಹೆಮ್ಮ ಕಸ್ತೂರಿ ತಿಲಕ ಶ್ರೀತುಳಸಿ ವನಮಾಲಿ ಶ್ರೀ ಶ್ರೀನಿವಾಸ
ನಾರದಾದಿ ಸುರವಂದ್ಯ ಶ್ರೀರಂಗರಂಗ ದಾಮೋದರನೆ
***ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು***
***ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ*** ||೨೮||

ನೀಡಭಯವನು ಗರುಡಗಮನ ಗಜರಾಜವರದ ವೇಂಕಟರಮಣ
ಭಕ್ತಕೋಟಿಯ ತಾಪವನು ನೀಗಿಸುತ ಸಲಹೋ ಕೋಟಿ ತಾಪಾಪಹರಣ
ಶ್ರೀರಂಗ ಶ್ರೀರಮಣ ಶ್ರಿತಜನಪಾಲ ದೀನಜನಮಂದಾರ
ವೇದನಾದಾತೀತ ಬೌದ್ಧಕಲ್ಕಿಯೆ ಸಂಕರ್ಷಣನೆ ಶ್ರೀ ಹರಿಯೇ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೨೯॥

ತಿರುಶೆಲ್ವ ಬಾರೆನಲು ನಲಿದೋಡಿ ಬಂದವನೆ ಚೆಲುವನಾರಾಯಣಿ
ಯದುಶೈಲನಾಥ ವೇದಾದ್ರಿನಿಲಯ ಯತಿರಾಜ ವರದ
ಪರಮಪಾವನಚರಣ ಸಪ್ತಾದ್ರಿವಾಸ ತಿರುವೇಂಕಟೇಶನೆ
ಭಕ್ತಬಾಂಧವನೆ ಪಾರ್ಥಸಾರಥಿಯೇ ವಾಸುದೇವ ಗೀತಗೋವಿಂದ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೩೦॥

ಪರಿಪರಿಯ ಪರಿಮಳದಿ ಮಂದಾನಿಲನು ಬಂದ ಒಲವಿಂದ
ಬೀಬಿನಾಚ್ಚಾರು ಕಾವೇರಿ ಗೋದೆಯರು ನಲಿದಿಪರು
ಜಯತುಜಯ ಕಾವೇಟಿರಂಗ ಜಯತುಜಯ ಕಾರುಣ್ಯರಂಗನಿಗೆನುತ
ಸಲಹುಬಾ ಭಕುತರನು ಪುಂಡರೀಕಾಕ್ಷ ಪ್ರದ್ಯುಮ್ನನೇ ಪಾಲ್ಗಡಲಶಯನ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೩೧॥

ಶರಣು ನಿನ್ನಡಿಗಳಲಿ ಕನಕನಾದಿಕೇಶವನೆ ಚೆಲುವ ಚೆನ್ನಿಗನೆ
ಶರಣು ನಿನ್ನಡಿಗಳಲಿ ಪುರಂಧರಾವಿಠಲ ಪರಮ ಪರಂಧಾಮ
ಶರಣು ಶರಣಯ್ಯ ಗದುಗಿನ ವೀರನಾರಾಯಣನೇ ನರಹರಿಯೇ
ಶರಣು ಶರಣಯ್ಯ ಆದಿಮದ್ಯಾಂತರಹಿತ ಅನಿರುದ್ಧನೇ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೩೨॥

ಭದ್ರಾದ್ರಿವಾಸ ನೀಡೆನೆಗೆ ನಿನ್ನಮರವಂದಿತ ಚರಣ ದರ್ಶನವ
ಶಂಕರಾರ್ಜಿತನೆ ಬದರಿ ನಾರಾಯಣನೇ ಭಕ್ತಬಾಂಧವನೆ
ವಿಶ್ವಂಬರನೆ ವಿಭುದ ವಂದಿತಚರಣ ವಿಧುರಾಕ್ರೂರವರದ
ನೀಡೆನೆಗೆ ನಿನ್ನೊಲವ ಒಡನಾಟ ಪರಮ ಪುರುಶೋತ್ತಮ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೩೩॥

ತಂದಿಹರು ಮಲ್ಲೆಮಲ್ಲಿಗೆ ಜಾಜಿ ಸಂಪಿಗೆ ಶ್ರೀತುಳಸಿ ಚಂದನದ ಮಾಲೆ
ಭಕುತಜನ ಕಾದಿಹರು ಅರ್ಪಿಸಲು ನಿನ್ನಡಿಗೆ ಬಯಸಿ ನಿನ್ನೊಲವು
ಶ್ರೀರಮಣ ಶ್ರೀಕಾಂತ ರಘುಕುಲಾಂಬುದಿ ಸೋಮ ರಘುನಂದನನೆ
ಪೊಡಮುಡುವೆ ನಿನ್ನಡಿಗಳಲಿ ಅಕ್ಷಯಫಲದಾತ ಅದೋಕ್ಷಜನೆ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೩೪॥

ಮಾತೆ ನೀನೆನೆಗೆ ಪಿತನು ನೀನೆನೆಗೆ ಯದುಶೈಲನಾಥ
ಸಖನು ನೀನೆನೆಗೆ ಗುರುವು ನೀನಿರಲು ಭಯವನರಿಯೆನು ಶ್ರೀಹರಿಯೆ
ವ್ರತನಿಯಮಗಳನರಿಯದೆನ್ನಪರಾಧಗಳು ಮನ್ನಿಸುತ ಸಲಹಯ್ಯ
ಪರಮಕರುಣಾ ಸಿಂಧು ಪ್ರಹ್ಲಾದ ವರದ ನಾರಸಿಂಹನೆ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೩೫॥

ನಿನ್ನ ಪಾದಕಮಲಗಳೆಮ್ಮ ಶಿರದ ಮೇಲಿರಲಿ ಶ್ರೀರಂಗರಂಗ
ನಿನ್ನಭಯಹಸ್ತವದೆಮ್ಮ ಕಾಪಾಡಲಿ ಅಚ್ಯುತಾನಂತ ಆನಂದ
ನಿನ್ನ ಸ್ಮರಣೆಯೊಳನವರತವಿರುವಂತೆ ಸಲಹಯ್ಯ ಸರಸಿಜಾಕ್ಷನೆ
ಸರ್ವೋತ್ತಮನೆ ಸಾರಂಗಧರನೆ ಶ್ರೀಹರಿಯೆ ಜನಾರ್ಧನನೆ
*ಸ್ವೀಕರಿಸಿ ಸಲಹಯ್ಯ ಭಕ್ತಿ ಕುಸುಮಾಂಜಲಿಯ ಸೇವೆಯನು*
*ಚಲುವನಾರಾಯಣನೆ ಯತಿರಾಜ ವರದ ಯದುಶೈಲನಾಥ* ॥೩೬॥

ಜಯತುಜಯ ಶ್ರೀರಂಗರಂಗ ಕಾವೇಟಿರಂಗ
ಜಯತುಜಯ ಸಿರಗೋದೆಯರಸನೇ ಜನಾರ್ಧನನೇ
ಜಯತುಜಯ ಆದಿಮದ್ಯಾಂತರಹಿತ ಜಗದಾದಿಜನ
ಜಯತುಜಯ ದಾಸಗೋಪಾಲವರದ ಉಪೇಂದ್ರ
*ಜಯತುಜಯ ಜಗದಾದಿಜಗೆ ವೇದಾದ್ರಿವಾಸನಿಗೆ*
*ಜಯತುಜಯ ಬೀಬಿನಾಚ್ಯಾರು ಮನದನ್ನೆ ಚಲುವನಿಗೆ* ॥೩೭॥

ಮಂಗಳವು ಶುಭಮಂಗಳವು ರಘುಕುಲಾನ್ವವರತ್ನ ದೀಪನಿಗೆ
ಮಂಗಳವು ಶುಭಮಂಗಳವು ಸರ್ವೋತ್ತಮಗೆ ಹರನೆ
ಮಂಗಳವು ಶುಭಮಂಗಳವು ಯದುಕುಲಾಂಬುದಿ ಸೋಮನಿಗೆ
ಮಂಗಳವು ಶುಭಮಂಗಳವು ನಂದನಂದನನೆ ಶ್ರೀ ಕೃಷ್ಣ
*ಮಂಗಳವು ಶುಭಮಂಗಳವು ಯತಿರಾಜಗೊಲಿದುಬಂದವಗೆ*
*ಮಂಗಳವು ಶುಭಮಂಗಳವು ದಾಸಗೋಪಾಲನ ಸರ್ವೇಶ್ವರಗೆ* ॥೩೮॥

॥ ನಿತ್ಯ ಜಯಮಂಗಳಂ ನಿತ್ಯಾ ಶುಭ ಮಂಗಳಂ ॥

# ಆರತಿ ಬೆಳಗುವ ಬನ್ನಿ

ಆರತಿ ಬೆಳಗುವ ಬನ್ನಿ
ಹನುಮಹೃತ್ಕಮಲವಾಸ ಶ್ರೀ ಆತ್ಮಾರಾಮನಿಗೆ ॥ಪ॥
ಜಯಮಂಗಳಾರತಿ ಶುಭಮಂಗಳಾರತಿ
ಆರತಿ ಬೆಳಗುವ ಬನ್ನಿ ॥ಅ. ಪ॥

ಯೋಗಿಯೋಗೇಶ್ವರಗೆ ಯೋಗಿಜನ ವಂದಿತಗೆ
ರಘುಕುಲಾಂಬುದಿ ಸೋಮ ಜಮಕಜಾರಮಣನಿಗೆ
ಧರೆಗೆ ದಕ್ಷಿಣದ ಬದರಿ ಯದುಶೈಲನಾಥನಿಗೆ
ಹನುಮ ತಾ ಜಪಿಸುವ **ತಾರಕನಾಮ ಆತ್ಮಾರಾಮನಿಗೆ**
*ನಳಿನನಾಭನಿಗಾರತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೧॥

ಕಡಲಿನಾಳವಳೆದು ವೇದಗಳ ಪೊತ್ತು ತಾ ತಂದವಗೆ
ಮತ್ಸ್ಯಾವತಾರಿಗೆ ಮಮತೆಯಾ ಮೂರುತಿ ಹಯವದನ ಶ್ರೀಹರಿಗೆ
ಮಂದರಗಿರಿಧಾರಿ ಮಾಮನೋಹರ ನಮ್ಮ ಮಂಗಳಾಂಗನಿಗೆ
ಕೂರ್ಮಾವತಾರವನೆ ತಾ ತಾಳ್ದ **ಶೇಷಶಯನ ಶ್ರೀರಂಗನಾಥನಿಗೆ**
*ರಮಾರಮಣನಿಗಾರುತಿ ಬೆಳಗುವಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೨॥

ದುಷ್ಟದಾನವರ ಸಂಹರಿಸಿ ವಸುಧೆ ಭಾರತಿಯ ಪೊರೆದವಗೆ
ವರಾಹರೂಪವನೆ ತಾಳ್ದವಗೆ ವಾರಿಜಾನೇತ್ರ ವೇದಾದ್ರಿವಾಸನಿಗೆ
ಕಂದನಾ ಮೊರೆಕೇಳಿ ಕಂಬದಲಿ ಬಿಂಬಿಸಿದ ಚೆಲುವ ನರಹರಿಗೆ
ಕ್ಷೀರವಾರಿಧಿಶಯನ **ವೈಕುಂಠಪತಿ ತಿರುವೇಂಕಟೇಶನಿಗೆ**
*ಜ್ಞಾನಗಮ್ಯ ಗರುಡಾದ್ರಿ ವಾಸನಿಗಾರುತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೩॥

ಮೂರಡಿಯ ಯಾಚಿಸುತ ಬಲಿಯ ಗೆಲಿದವಗೆ
ವಾಮನಗೆ ಇಂದ್ರಾದಿ ವಂದಿತ ಚರಣ ಕನಕಾದ್ರಿವಾಸನಿಗೆ
ದುಷ್ಟಕ್ಷತ್ರಿಯರ ಸಂಹರಿಸಿ ಭುವಿಯ ತಾ ಬೆಳಗಿದವಗೆ
ಧೀರ **ಪರುಶುರಾಮಾವತಾರಿಗೆ ಯದುಶೈಲನಾಥನಿಗೆ**
*ಕ್ಷೀರಾಬ್ಧಿತನಯ ರಮಣನಿಗಾರುತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೪॥

ದಶರಥಾತ್ಮಜ ನಮ್ಮ ಧರಣಿಜಾರಮಣ ದಶಕಂಠ ಮರ್ದನಗೆ
ಯಾದವಾದ್ರೀಶ ನಮ್ಮ ಶ್ರಿತಜನಪಾಲ ಆತ್ಮಾರಾಮನಿಗೆ
ಶಿಲೆಯ ಪಾವನಗೈದ ಪಾವನ ಚರಣ ಕೌಸಲ್ಯಾತನಯನಿಗೆ
ವೇದಾದ್ರಿವಾಸ **ಶರಣುಜನಪಾಲ ಕೋದಂಡಪಾಣಿಗೆ**
*ಮುಖ್ಯ ಪ್ರಾಣಾಂತರ್ಗತನಿಗಾರುತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೫॥

ಧರಣಿಭಾರವನಿಳುಹಿದ ಲೋಕಮೋಹಕಶ್ಯಾಮ
ವಸುದೇವ ದೇವಕೀ ತನಯ ರುಕ್ಮಿಣೀ ವಲ್ಲಭಗೆ
ಮಾನಿನಿಯ ಮಾನ ರಕ್ಷಣೆಗೈದ ದ್ವಾರಕಾನಾಥನಿಗೆ
ವಿಶ್ವರೂಪವ ತೋರ್ದ **ವಿಶ್ವಂಬರಗೆ ವಿಬುಧ ವಂದಿತಗೆ**
*ಪಾರ್ಥಸಾರಥಿಗಾರತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥ ೬ ॥

ಅಕ್ಷಯ ವಸನವನಿತ್ತ ಅಕ್ಷಯ ಫಲದಾತನಿಗೆ
ಭಕ್ತಸುಧಾಮನಿಗೊಲಿದ ಭಕ್ತಬಾಂಧವ ಭಕ್ತಭಕ್ತನಿಗೆ
ಸಿರಿಪಿಲ್ಲಿಪುತ್ತೂರು ಸಿರಿಗೊದೆಯರಸ ಶ್ರೀರಂಗರಂಗನಿಗೆ
ವಿಧುರನಾ ಮನಸಗೈದು **ಕ್ಷೀರವಾರಿಧಿಯ ತಂದವಗೆ**
*ಆನಂದ ಮೂರುತಿಗಾರುತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೭॥

ವಸುದಭಾರತಿಯ ಪೊರೆದವಗೆ ಬೌದ್ಧಕಲ್ಕಿಗೆ ಹತ್ತಾವತಾರಿಗೆ
ಸತ್ಯ ಶಿವ ಸುಂದರಗೆ ನಿತ್ಯನಿರಂಜನ ಯತಿರಾಜ ವರದನಿಗೇ
ನೀಲಮೇಘಶ್ಯಾಮ ನಿಗಮಗೋಚರ ನಮ್ಮ ನಂದನಂದನಿಗೆ
ಸೃಷ್ಟಿ ಸ್ಥಿತಿ ಬ್ರಹ್ಮಾಂಡಪಾಲ **ಪದುಮನಾಭನಿಗೆ**
*ಹನುಮ ಹೃತ್ಕಮಲ ವಾಸನಿಗಾರುತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೮॥

ರಾಮಾನುಜ ಮುನೀಂದ್ರ ವಂದಿತಾ ಚರಣನಿಗೆ
ವಲ್ಮೀಕದಿಂದುದಿಸಿದಾ ನಮ್ಮ ಚೆಲುವ ನಾರಾಯಣಗೆ
ಅನ್ನಮರಾರಾಧ್ಯಮೂರುತಿ ಅಲುಮೇಲು ಪದ್ಮಾವತೀಶನಿಗೆ
ನಿತ್ಯೋತ್ಸವಗೆ **ಗರುಡಗಮನ ಗಜರಾಜವರದನಿಗೆ**
*ಮಂವಗಮನೆಯರೆಲ್ಲಾ ಮುತ್ತು ಮಾಣಿಕ್ಯದಾರುತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೯॥

ನಿತ್ಯ ಯಶೋದಾರ್ಪಿತ ಶ್ರೀತುಳಸಿ ನೈವೇದ್ಯ ಸ್ವೀಕೃತಗೆ
ಕಂದಶ್ರೀಕಾಂತ ಚಂಕ್ರವರ್ತಿಯರಾ ಪೂಜೆಗೊಲಿದವಗೆ
ಶಶಿಸೂರ್ಯನೇತ್ರನಿಗೆ ಕೋಟಿಕಂಗಳಲಿಕಾಯ್ದುವಗೆ
ವಾಸಗೋಪಾಲ ವರದ **ಯದುಶೈನಾಥ ಚೆಲುವ ನರಹರಿಗೆ**
*ಬೀಬಿನಾಚ್ಚಾರು ಮನದನ್ನಗಾರುತಿ ಬೆಳಗುವ ಬನ್ನಿ*
*ಚಿನ್ಮಯಗೆ ಚಿದ್ರೂಪನಿಗಾರುತಿ ಬೆಳಗುವ ಬನ್ನಿ* ॥೧೦॥

## ಇತರರಿಗೆ ತಿಳಿಯಲಳವೇ

ಇತರರಿಗೆ ತಿಳಿಯಲಳವೇ ನಿನ್ನ ನಾಮದ ಮಹಿಮೆ
ಕ್ಷೀರಸಾಗರ ಶಯನ ನಯನಾಭಿರಾಮ ॥ ಪ ॥

ಸತತ ಸತ್ಯವ್ರತರು ಸಂಪೂರ್ಣ ಮೋಹವಿರಹಿತರು
ಸಂಸಾರ ವಾರಿಧಿಯ ಈಸಬಲ್ಲವರು ಬಲ್ಲರೋ ॥ ಅ.ಪ ॥

ಶಿವನು ತಾನನವರತ ಜಪಿಸುವಾ ತಾರಕ ನಾಮ
ವಾಲ್ಮೀಕಿ ಕೋಗಿಲೆಯು ಪಾಡಿದಾ ಶ್ರೀನಾಮ
ವಿಷ್ಣುಚಿತ್ತರು ಸತತ ಪಾಡಿ ಪೊಗಳಿದಾ ತಿರುನಾಮ
ಸಿರಿವಿಲ್ಲಿಪುತ್ತೂರು ಸಿರಿಗೋದೆಯರಸನೇ ॥ ೧ ॥

ಭಾಗವತರ ಪಾದ ಸೇವಿಪರರಿತು ಪಾಡುವ ನಾಮ
ಭಾಷ್ಯಕಾರರಿಗೊಲಿದ ವೇದಾದ್ರಿ ವಾಸ ಚೆಲುವ ನರಹರಿಯೆ
ಬಲ್ಲ ದೇವಕೀ ವಸುದೇವ ನಂದಯಶೋದೆಯರು ಬಲ್ಲರೋ
ಪ್ರಹ್ಲಾದ ಧ್ರುವರಾಜ ರಾಜರಾಜ ರಾಜಶೇಖರರು ಬಲ್ಲರೋ ॥ ೨ ॥

ಮುಖ್ಯ ಪ್ರಾಣನು ಬಲ್ಲ ವೈನತೇಯನು ತಾ ಬಲ್ಲ
ವಿಧುರಾಕ್ರೂರ ಬಲ್ಲ ದೇವಮುನಿ ತಾವೆಲ್ಲ ಬಲ್ಲರೋ
ಬೀಬಿನಾಚ್ಯಾರು ಜನಕಜೆಯು ರುಕ್ಮಿಣೀ ಸತ್ಯಭಾಮೆಯು ಬಲ್ಲರೋ
ದಾಸಗೋಪಾಲವರದ ಯಾದವಾದ್ರೀಶ ಶೆಲ್ವನಾರಾಯಣ ॥ ೩ ॥



---

## ಈತನೊಬ್ಬನೇ ಸರ್ವೇಶ್ವರನು



ಈತನೊಬ್ಬನೇ ಸರ್ವೇಶ್ವರನು
ಯಾದವಾದ್ರೀಶ ಚೆಲುವ ನಾರಾಯಣನು ॥ ಪ ॥

ಕೈಲಾಸಪತಿ ಸತಿಗೆತಾ ಪೇಳ್ದ ತಾರಕಾ ನಾಮನು
ಯೋಗಿಜನ ವೃಂದ ಮಾನಸಾ ರಾಜಹಂಸನು ॥ ಅ.ಪ ॥

ಯತಿರಾಜ ವರದ ವಲ್ಮೀಕಾಲಯ ನಿಲಯ
ಬೀಬನಾಚ್ಯಾರು ಮನದನ್ನ ದೇವಕೀತನಯ
ದ್ರುಪದ ಕುವರಿಯ ಕಾಯ್ದ ದಾಮೋದರನೋ
ಶಂಖಚಕ್ರಧರ ಪೀತಾಂಬರ ಧಾರಿ ರುಕ್ಮಿಣೀ ರಮಣ ॥ ೧ ॥

ಮತ್ಸ್ಯಕೂರ್ಮ ವರಾಹವಾಮನ ನಾರಸಿಂಹನಿವನು
ಯುಗಯುಗದಿ ತಾ ಬಂದ ಶೇಷಶಯನ ಶೇಷಾದ್ರಿವಾಸ
ವೇದನಾದಾಂತರಂಗ ಹಯವದನ ಶ್ರೀಹರಿಯು
ರವಿಚಂದ್ರ ನಯನ ಕೋಟಿ ತಾಪಾಪಹರಣ ಶ್ರೀರಮಣ ॥ ೨ ॥

ಕುಲಶೇಖರರಾರಾಧ್ಯ ಮೂರುತಿ ಜನಕಜಾ ರಮಣ
ಸಿರಿಗೋದೆಯರಸ ಶ್ರೀರಂಗರಂಗ ಕಾವೇಟಿ ರಂಗ
ಗೋವರ್ಧನೋದ್ಧಾರಿ ಲೀಲಾವತಾರಿ ಮುಚುಕುಂದವರದ
ದಾಸಗೋಪಾಲ ವರದ ತಿರುಶೆಲ್ವ ನಾರಾಯಣನು ॥ ೩ ॥



॥ ಶ್ರೀಮತೇ ರಾಮಾನುಜಾಯ ನಮಃ ॥



# ಅರ್ಪಣೆ



ಅಮ್ಮಮ್ಮ ಸಿಂಗಮ್ಮ ತಾಯಾರು
(ನನ್ನ ತಾಯಿಯವರ ತಾಯಿ) ೧೮೪೨ - ೧೯೫೨

ಶ್ರೀ ರಾಮಾನುಜರು ಬಂದು ಬೆಳಗಿದ ದಾರಿಯಲ್ಲಿ ಅನನ್ಯ ಭಕ್ತಿಯಿಂದ ನಡೆದು, ನಮ್ಮನ್ನು ತಮ್ಮ ಮಡಿಲಲ್ಲಿಟ್ಟುಕೊಂಡು, ಶ್ರೀಮದ್ರಾಮಾಯಣ ಮಹಾಭಾರತ, ಭಾಗವತ ಕಥೆಗಳನ್ನು ಹೇಳುತ್ತಾ, ಹರಸಿದೆಮ್ಮ ಅಮ್ಮಮ್ಮ ಮತ್ತು ಮಾತಾ ಪಿತೃಗಳ ದಿವ್ಯ ಚರಣಗಳ ಸ್ಮರಣೆಯಲ್ಲಿ, ಈ ಎರಡು ರಚನೆಗಳನ್ನು ಭಕ್ತಿಪೂರ್ವಕವಾಗಿ ಅರ್ಪಣೆ.

(ಈ ಎರಡು ರಚನೆಗಳೂ ಈ ಮೊದಲೇ ಪುಟ್ಟಪುಟ್ಟ ಪುಸ್ತಕಗಳಾಗಿ ಮುದ್ರಣವಾಗಿದ್ದರೂ ಪ್ರತಿಗಳು ಮುಗಿದಿರುವುದರಿಂದಲೂ ಅನೇಕ ಬಂಧುಗಳ ಅಪೇಕ್ಷೆಯಂತೆ, ಇಂದು ಈ 'ತಿರುಪ್ಪಾವೈ' ಕನ್ನಡಭಾವಾನುವಾದದ ಜೊತೆಯಲ್ಲಿ ತಿದ್ದುಪಡಿಗಳೊಂದಿಗೆ ಮತ್ತೆ ಮುದ್ರಿಸಿದೆ. ಇದು ಎಲ್ಲ ಬಂಧುಗಳ ಪಾರಾಯಣಕ್ಕೆ ಅನುಕೂಲಿಸಿದಲ್ಲಿ ನಾನು ಧನ್ಯ )



೨೩-೧-೨೦೦೦

ದಾಸಗೋಪಾಲ [illegible]
ಅರ್ಚಕ [illegible] ಬಿ.ಎಸ್. [illegible])
ಶ್ರೀ [illegible] ತ್ರ, ನರಸೀಪು[illegible]
ತ[illegible]ಗಳೂರು ಜಿಲ್ಲೆ-[illegible]೧.

ಶ್ರೀಮತೇ ರಾಮಾನುಜಾಯ ನಮಃ



ತಾ|| 9-3-2000 ರಂದು ತುಮಕೂರು ಜಿಲ್ಲೆಯ ಶ್ರೀ ದೇವರಾಯನದುರ್ಗದಲ್ಲಿ ಭಕ್ತಕೋಟಿ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಗೆ ಬೆಳ್ಳಿಯ ತೇರನ್ನು ಶ್ರೀ ಶ್ರೀ **ಯದುಗಿರಿ (ಮೇಲುಕೋಟೆ) ಯತಿರಾಜ ಸಂಪತ್ ಕುಮಾರ ರಾಮಾನುಜ ಜೀಯರ್** ತಿರುವಳಿಗಳವರ ಅಮೃತ ಹಸ್ತದಿಂದ ಸಮರ್ಪಿಸಿದಾಗ ಶ್ರೀ ಗುರು ಚರಣಗಳ ಬಳಿ ಶ್ರೀ ಆತ್ಮಾರಾಮ ಕ್ಷೇತ್ರದ ಲೇಖಕ ದಂಪತಿಗಳಾದ ಅರ್ಚಕ ವೇಣುಗೋಪಾಲ್ ಸೌ|| ಯಶೋಧಮ್ಮ

- : ಫೋಟೋ ಕೃಪೆ : -

***ಶ್ರೀ ಎನ್. ವೆಂಕಟೇಶ್ ಸೌ|| ಶೈಲಜ***

ಎಸ್.ವಿ. ವಿಡಿಯೋ, ಮೂವೀ ಮತ್ತು ಫೋಟೋ ಫ್ಲಾಷ್
ಶ್ರೀರಾಮ ಮಂದಿರದ ಬಳಿ, ಕೆ.ಆರ್. ಬಡಾವಣೆ,
ತುಮಕೂರು.

